KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜುಲೈ ೧೩, ೨೦೦೬ (ಆಷಾಢ ೨೨, ಶಕ ವರ್ಷ ೧೯೨೮) | ಸಂಚಿಕೆ ೨೮ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ತಿದ್ದುಪಡಿ ಸಂಖ್ಯೆ:ಒಇ 312 ಪೊಸಿಅ 2005, ಬೆಂಗಳೂರು, ದಿನಾಂಕ: 6ನೇ ಜೂನ್ 2006**

ದಿನಾಂಕ:15.5.2006ರ ಸಮ ಸಂಖ್ಯೆಯ ಸರ್ಕಾರಿ ಆದೇಶದಲ್ಲಿ ಎಲ್ಲೆಲ್ಲಿ "ಶ್ರೀ ಎಂ. ಶಿವಣ್ಣ" ಎಂದು ಬಳಸಲಾಗಿದೆಯೊ, ಅದನ್ನು "ಶ್ರೀ ಎಂ. ಶಿವಪ್ಪ" ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 961

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ), ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**

1. ಎಡಿಜಿಪಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ(ಜಿ)/ಸಿಟಿ/ ಕ್ರೈಂ.47/2005, ದಿನಾಂಕ: 18.4.2006.
2. ತನಿಖಾಧಿಕಾರಿಯ ವರದಿ ಸಂಖ್ಯೆ: 47/2005, ದಿನಾಂಕ 24.3.2006.
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪೀಠಿಕೆ:**

1) ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ), ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ ಇವರ ವಿರುದ್ಧ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಗುನ್ನೆ ಸಂಖ್ಯೆ:47/2005ರ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ-2,3) ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ 18.4.2006 (ಉಲ್ಲೇಖ-) ರೊಡನೆ ಕಳೂಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

2) ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ.47/2005, ದಿನಾಂಕ 18.4.2006 ರೊಂದಿಗೆ ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

(1) ಶ್ರೀ ತಿಮ್ಮರಾಯಪ್ಪ ಬಿನ್ ದಿ:ರಾಮಣ್ಣ, ಐಮರೆಡ್ಡಿಹಳ್ಳಿ, ಕಸಬಾ ಹೋಬಳಿ, ಚಿಂತಾಮಣಿ ತಾಲ್ಲೂಕು ಇವರ ಫಿರ್ಯಾದಿ ದಿನಾಂಕ: 16.11.2005.

(2) ಪ್ರಥಮ ವರ್ತಮಾನ ವರದಿ ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ:47/2005.

(3) ಪ್ರಾಯೋಗಿಕ ಪಂಚನಾಮೆ ದಿನಾಂಕ: 16.11.2005.

(4) ಟ್ರ್ಯಾಪ್‌ನ ಮಹಜರ್ ದಿನಾಂಕ: 16.11.2005.

(5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಪಿಹೆಚ್‌ಐ/ಸಿಎಂಇ/ಲೋಕ್/90/05-06, ದಿನಾಂಕ:21.12.2005.

(6) ಕೃತ್ಯ ನಡೆದ ಸ್ಥಳದ ನಕಾಶೆ

(7) ಸಾಕ್ಷಿಗಳ ಹೇಳಿಕೆಗಳು

(ಅ) ಶ್ರೀ ಬಿ.ಆರ್. ಮುರಳಿರಾಘವ್ (ಆ) ಶ್ರೀ ಶಿವಣ್ಣ

(ಇ) ಶ್ರೀ ಮೂಡಲಗಿರಿ (ಈ) ಶ್ರೀ ಎಂ.ಹೆಚ್. ಬನ್ನ

(ಉ) ಶ್ರೀ ಎಂ. ಶಂಕರಪ್ಪ (ಊ) ಶ್ರೀ ಎಸ್.ಪಿ. ಪರಮೇಶ್

(ಋ) ಶ್ರೀ ಎ.ಎನ್. ರಾಜಣ್ಣ

(8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ:ವೈಶಿನಿ/ಎನ್‌ಆರ್‌ಸಿ(2)/19/2005-06 ವಿಷಯ: ಕು:ಉಮಾ.ಎಸ್.ಜಿ ಇವರ ವಿದ್ಯಾಭ್ಯಾಸವನ್ನು ಕೋಲಾರದ ಪವನ್ ನರ್ಸಿಂಗ್ ಕಾಲೇಜಿನಿಂದ ಚಿಂತಾಮಣಿಯ ಫಿಲೋಮಿನಾ ನರ್ಸಿಂಗ್ ಕಾಲೇಜಿಗೆ ವರ್ಗಾವಣೆ ಕೋರಿಕೆ ಬಗ್ಗೆ.

(9) ಆಪಾದಿತರ ಸಮಜಾಯಿಷಿ ಹೇಳಿಕೆಗಳು

3) ತನಿಖಾಧಿಕಾರಿಗಳಾದ ಶ್ರೀ ಎಂ.ಜಿ. ಸುಬ್ಬರಾವ್, ಪೊಲೀಸ್ ಇನ್ಸ್‌ಪೆಕ್ಟರ್, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕಿಯ ಶಿಕ್ಷಣ ನಿರ್ದೇಶನಾಲಯ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ ಠಾಣೆಯಲ್ಲಿ ಗುನ್ನೆ ಸಂಖ್ಯೆ:47/2005ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13 (2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

4) ಆಪಾದಿತರಾದ ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಫಿರ್ಯಾದಿಯಾದ ಶ್ರೀ ತಿಮ್ಮರಾಯಪ್ಪ ಬಿನ್ ಲೇಟ್ ರಾಮಣ್ಣ, 49 ವರ್ಷಗಳು, ಐಮರೆಡ್ಡಿಹಳ್ಳಿ, ಕಸಬಾ ಹೋಬಳಿ, ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ ಇವರ ನಾದಿನಿಯ ಮಗಳಾದ ಕು:ಎಸ್.ಜೆ. ಉಮಾರವರಿಗೆ ಕೋಲಾರದ ಪವನ್ ನರ್ಸಿಂಗ್ ಶಾಲೆಯಿಂದ ಚಿಂತಾಮಣಿಯಲ್ಲಿರುವ ಫಿಲೋಮಿನಾ ನಿರ್ಸಂಗ್ ಶಾಲೆಗೆ ವಿದ್ಯಾಭ್ಯಾಸಕ್ಕಾಗಿ ವರ್ಗಾವಣೆ ಮಾಡಲು ರೂ.20,000/-ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 16.11.2005ರಂದು ಬೆಂಗಳೂರು ನಗರ, ಆನಂದ್ ರಾವ್ ವೃತ್ತ, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ರವರ ಕಛೇರಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ ಇವರು ಅಕ್ರಮ ಸಂಭಾವನೆಯಾದ ರೂ.15,000/- ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಫ್ತಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾವನೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.15,000/-ಗಳನ್ನು ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ ಇವರಿಂದ ಬೆಂಗಳೂರು ನಗರ, ಆನಂದ ರಾವ್ ವೃತ್ತ, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ)ರವರ ಕಛೇರಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

5) ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಮತ್ತು ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

6) ಸಕ್ಷಮ ಪ್ರಾಧಿಕಾರವಾದ ಸರ್ಕಾರ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ಅಡಿಯಲ್ಲಿ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳವದ್ದಾಗಿರುತ್ತದೆ. ಆದ್ದರಿಂದ, ಲಂಚ ನಿರೋಧಕ ಕಾಯ್ದೆ 1988ರ ಕಲಂ 19(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2) ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 163 ಎಂಎಂಸಿ 2005, ಬೆಂಗಳೂರು, ದಿನಾಂಕ: 16ನೇ ಜೂನ್ 2006**

7) ಆರೋಪಿಯಾದ ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರನ್ನು ಲಂಚ ನಿರೋಧಕ ಕಾಯ್ದೆ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಲಾಗಿದೆ.

8) ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು.

9) ಅದೇ ನಿಯಮಾವಳಿಯ ನಿಯಮ 19(1)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

10) ಆದ್ದರಿಂದ, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 7.6.2006ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

ಪಿ.ಆರ್. 962

## AGRICULTURE AND HORTICULTURE SECRETARIAT

**Sub:** Implementation of the Coconut Development Board Projects during 2006-07.

**Read:**
1. G.O. No. ಕೃತೋಇ 71 ತೋಯೋಕಾ 2006 ದಿ:15.4.206.
2. Letter of CDB No.F.No.223/2006-PA dated 5.5.2006.
3. Letter of Director of Horticulture NoDH/PLN/AHO5/15/2006-07 date 8.6.2006.

**Preamble:-**

The State Government had accorded sanction for implementation of the scheme "Integrated Farming in Coconut Holding with Coconut Development Board Assistance" (100% CDB) under Head of account 2401-00-108-2-35 with an outlay of Rs 150.00 lakh as an Ongoing scheme during the year 2006-2007 vide Government Order read at (1) above. Further, under Zilla Panchayat sector an account of Rs.226.45 lakh has been provided for the same purpose during 2006-07. Thus, a total amount of Rs.376.45 lakh is made available for Coconut Development Board programme during 2006-07.

Coconut Development Board has conveyed its approval for the implementation of its project "Integrated Development of Coconut Industry in India" at a revised total cost of Rs. 259.44 lakh for the year 2006-07 vide its letter read at (2) above.

The Director of Horticulture has exmined the same and has requested the Government to accord administrative sanction for the implementation of the Coconut Development Board programmes with a revised allocation of Rs.259.44 lakh during 2006-07 as per his letter read at (3) above. This was examined and the following order is passed.

**Government Order No. AHD 80 HPP 2006, Bangalore, Dated: 13th June 2006**

Government is pleased to permit the Director of Horticulture for implementing the Coconut evelopment Programmes for the year 2006-2007 with a revised allocation of Rs.259.44 lakh on ongoing basis during the year 2006-2007 within the allocation provided for the scheme namely "Integrated farming in coconut holdings with Coconut Development Board assistance (100% CDB) (2401-00-108-2-35). The revised programme details will be as follows;

| Sl. No. | Name of the Scheme | Target | | |
|---|---|---|---|---|
| | | Phy. (Ha.) | Fin.) (Rs. in lakhs) | Implementing Agency |
| 1 | 2 | 3 | 4 | 5 |
| A | Integrated Development of Coconut industry in India | | | |
| 1 | Production and distribution of planting materials | | | Coconut Development Board |
| | a) Production and distribution of planting material (50:50) | 25,000 seedlings | 3.125 | |
| | b) Aid to private nurseries and seed gardens | | | |
| | (i) Seed garden (Big unit) | 2 | 7.50 | |
| | (ii) Nursery (Small unit) | 2 | 3.00 | |
| 2) | Expansion of area under Coconut | 250ha. | 12.44 | Coconut Development Board |
| 3) | Integrated Farming in Coconut holdings for Productivity Improvement | | | |

| 1 | 2 | 3 | 4 | 5 |
|---|---|---|---|---|
| | a) Management of disease affected Palms | 10000 Palms | 25.00 | Department of Horticulture GOK |
| | b) Laying out of demonstration plot | 550 ha | 182.375 | 115 ha. by CDB, 435 ha. by Department of Horticulture, GOK |
| | c) Organic Manure Unit | 130 Units | 26.00 | 50 units by CDB 80 units by Department of Horticulture, GOK |
| | **Total- (A)** | | **259.44** | |

The district-wise physical targets under Area Expansion Programme and Aid to private nurseries during 2006-07 will be as follows;

| Sl. No. | District | Phy. (Ha) | Sl. No. | District | Phy. (Ha) |
|---|---|---|---|---|---|
| 1. | Bangalore (Urban) | 4 | 2. | Bangalore (Rural) | 10 |
| 3. | Chitradurga | 17 & 1 small unit under Aid to private nurseries | 4.<br>5.<br>6. | Davanagere<br>Kolar<br>Shimoga | 11<br>12<br>10 |
| 7. | Tumkur | 22 & 1 big unit under Aid to private Aid to privaqte nurseries | 8.<br>9.<br>10. | Mysore<br>Mandya<br>Chamarajanagar | 14<br>17<br>17 |
| 11.<br>12. | Chickmagalur<br>Dakshina Kannada | 12<br>12 & small unit under Aid to private nurseries | 13.<br>14. | Udupi<br>Hassan | 10<br>12 & 1 big unit under Aid to private nurseries |
| 15. | Kodagu | 5 | 16. | Begaum | 5 |
| 17. | Bagalkot | 5 | 18. | Bijapur | 5 |
| 19. | Dharwad | 5 | 20. | Gadag | 5 |
| 21. | Haveri | 7 | 22. | Uttara Kannada | 12 |
| 23. | Bellary | 6 | 24. | Gulbarga | 4 |
| 25. | Koppal | 4 | 26. | Raichur | 4 |
| 27. | Bidar | 3 | | | |
| | **Total** | **250 ha. and 2 big and 2 small nurseries** | | | |

1. The Director of Horticulture shall implement the scheme strictly in accordance with the guidelines of Coconut Development Board. He shall also get the relases made from Coconut development Board.
2. Submit the Utilization Certificate to Coconut Development Board under intimation to the Government.
3. 30%, 16% nd 8% of allocation under demonstration plot, organic manure unit, area expansion programme and aid to nursery shall be given to women, SC, ST respectively.
4. Joint Director of Horticulture, plantation crops, Lalbagh, Bangalore-4 (Ph: 26573790) will be responsible to report monthly scheme wise physical and financial achievement under the Coconut Development Board programmes to the Coconut development Bard and to the Government by 10th of every succeeding month.

By Order and in the name of the Governor of Karnataka,

**N. MANJULAGEETHA**

P.R. 963

Under Secretary to Government,
Agriculture & Horticulture Department.

**ಶಿಕ್ಷಣ ಸಚಿವಾಲಯ**

**ವಿಷಯ:** ಪದವಿ ಪೂರ್ವ ಶಿಕ್ಷಣ ಇಲಾಖೆಯ ಜಿಲ್ಲಾ ಕಛೇರಿಗಳಲ್ಲಿರುವ 6 ಶಾಖಾಧಿಕಾರಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 584 ಡಿಪಿಐ 95 ದಿ: 30.4.1997 ಮತ್ತು 15.10.1998.
2. ಸರ್ಕಾರದ ಆದೇಶ ಸಂಖ್ಯೆ: ಇಡಿ 330 ಡಿಪಿಐ 1997 ದಿ: 10.6.1999.
3. ಸರ್ಕಾರದ ಆದೇಶ ಸಂಖ್ಯೆ: ಇಡಿ 212 ಡಿಪಿಐ 99 ದಿ: 21.12.1999.
4. ಸರ್ಕಾರದ ಆದೇಶ ಸಂಖ್ಯೆ: ಇಡಿ 46 ಡಿಪಿಐ 2000 ದಿ: 10.2.204.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಸೇರಿದ ಉಪನಿರ್ದೇಶಕರು/ ವಿಷಯ ತಜ್ಞರ ಹುದ್ದೆಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ವಿಭಾಗೀಯ ಸಹನಿರ್ದೇಶಕರ ಕಛೇರಿಗಳಿಂದ ಬೇರ್ಪಡಿಸಿ ಆಡಳಿತಾತ್ಮಕ ಹಿತದೃಷ್ಟಿಯಿಂದ ಪ್ರತಿ ಜಿಲ್ಲೆಗೆ ಒಂದರಂತೆ ಹೊಸದಾಗಿ ಪ್ರಾರಂಭಿಸಲಾದ ಪದವಿ ಪೂರ್ವ ಶಿಕ್ಷಣ ಇಲಾಖೆಯ ಜಿಲ್ಲಾ ಮಟ್ಟದ ಕಛೇರಿಗಳಿಗೆ ಸ್ಥಳಾಂತರಿಸಲಾಗಿದೆ.

ನೂತನವಾಗಿ ಪ್ರಾರಂಭಿಸಲಾದ ಕಛೇರಿಯ ಆಡಳಿತ ನಿರ್ವಹಣೆಗೆ ಮತ್ತು ಉಪನಿರ್ದೇಶಕರುಗಳಿಗೆ ಸಹಾಯಕವಾಗಿ ಕಾರ್ಯನಿರ್ವಹಿಸಲು ಕೆಲವೊಂದು ಷರತ್ತುಗಳನ್ನು ವಿಧಿಸಿ ಪೂರಕ ಸಿಬ್ಬಂದಿಗಳ ನಮೂನೆಯನ್ನು ನಿಗದಿಪಡಿಸಿ ಈ ಹುದ್ದೆಗಳಿಗೆ ರೀಡಿಪ್ಲಾಯ್‌ಮೆಂಟ್ ಮುಖಾಂತರ ತುಂಬುವ ವ್ಯವಸ್ಥೆ ಮಾಡಲು ಮೇಲೆ ಓದಲಾದ (2)ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

ಪದವಿ ಪೂರ್ವ ಶಿಕ್ಷಣ ಇಲಾಖೆ ಕೇಂದ್ರ ಕಛೇರಿಯಲ್ಲಿ ಕಡತಗಳ ಶೀಘ್ರ ವಿಲೇವಾರಿಯ ದೃಷ್ಟಿಯಿಂದ ಶಾಖಾಧಿಕಾರಿಗಳ ಹುದ್ದೆಗಳ ಅಗತ್ಯತೆ ಕೇಂದ್ರ ಕಛೇರಿಯಲ್ಲಿ ಅಗತ್ಯವಿಲ್ಲವೆಂದು ತಿಳಿಸಿ ಅಲ್ಲಿರುವ 6 ಹುದ್ದೆಗಳನ್ನು ಕಾರ್ಯಭಾರವಿರುವ 6 ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಸ್ಥಳಾಂತರಿಸುವಂತೆ ನಿರ್ದೇಶಕರು ಕೋರಿದ್ದ ಮೇರೆಗೆ ಮೇಲೆ ಓದಲಾದ (3)ರ ಆದೇಶದಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ, ಬೆಂಗಳೂರು ಉತ್ತರ, ತುಮಕೂರು, ಕೋಲಾರ, ಮೈಸೂರು, ದಾವಣಗೆರೆ ಹಾಗೂ ಬೆಳಗಾಂ ಜಿಲ್ಲಾ ಉಪನಿರ್ದೇಶಕರುಗಳ ಕಛೇರಿಗೆ ರೂ.5200-9580ರ ವೇತನ ಶ್ರೇಣಿಯ ಅಧೀಕ್ಷಕರ ಹುದ್ದೆಯಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶನಾಲಯದಲ್ಲಿನ ಲಿಪಿಕ ವೃಂದದ ರೂ.6000-11200ರ ವೇತನ ಶ್ರೇಣಿಯ ಶಾಖಾಧಿಕಾರಿ ಹುದ್ದೆಗಳನ್ನು ಸ್ಥಳಾಂತರಿಸಿ ಸ್ಥಾಪಿಸಲಾಗಿದೆ. ಅದು ಅಲ್ಲದೆ ಜಿಲ್ಲಾ ಕಛೇರಿಗಳಿಂದ ಸೂಪರ್‌ನ್ಯೂಮರಿ ಮಟ್ಟದ ಹುದ್ದೆಗಳಲ್ಲಿ ಏಕರೂಪತೆ ಇರುವುದು. ಅಗತ್ಯವಾದ ಕಾರಣ ಈ 6 ಶಾಖಾಧಿಕಾರಿ ಹುದ್ದೆಗಳು, ಈ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರು ನಿವೃತ್ತಿ ಅಥವಾ ಬಡ್ತಿ ಇನ್ನಿತರೆ ಯಾವುದೇ ಕಾರಣಗಳಿಂದ ಖಾಲಿಯಾದಾಗ ಸದರಿ ಶಾಖಾಧಿಕಾರಿ ಹುದ್ದೆಗಳನ್ನು ಅಧೀಕ್ಷಕರ ಹುದ್ದೆಯ ಮಟ್ಟಕ್ಕೆ ಇಳಿಸುವಂತೆ ಆದೇಶಿಸಲಾಗಿದೆ.

ಮೇಲೆ ಓದಲಾದ (4)ರ ಆದೇಶದಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ಕೇಂದ್ರ ಕಛೇರಿಯಲ್ಲಿ ಗಣನೀಯ ಪ್ರಮಾಣದಲ್ಲಿ ಕಾರ್ಯ ಒತ್ತಡ ಹೆಚ್ಚಾದ ಕಾರಣ, ಉಪನಿರ್ದೇಶಕರ ಕಛೇರಿಗಳಿಗೆ ಸ್ಥಳಾಂತರಿಸಲಾದ 6 ಶಾಖಾಧಿಕಾರಿ ಹುದ್ದೆಗಳನ್ನು ಆ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳೊಂದಿಗೆ ಕೇಂದ್ರ ಕಛೇರಿಗೆ ಸ್ಥಳಾಂತರಿಸಲು ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರು ಕೋರಿದ್ದರ ಮೇರೆಗೆ ಸದರಿ ಹುದ್ದೆಗಳನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯ ಕೇಂದ್ರ ಕಛೇರಿಗೆ ಸ್ಥಳಾಂತರಿಸಿ ಆದೇಶಿಸಿದೆ. ಆದರೆ ದಿನಾಂಕ:20.12.1999ರ ಆದೇಶ ಸಂಖ್ಯೆ: ಇಡಿ 212 ಡಿಪಿಐ 99 ರಲ್ಲಿ 6 ಶಾಖಾಧಿಕಾರಿ ಹುದ್ದೆಗಳು ಅದರಲ್ಲಿ ಕಾರ್ಯನಿರ್ವಹಿಸುತ್ತಿರುವವರು ನಿವೃತ್ತಿ ಅಥವಾ ಬಡ್ತಿ ಇನ್ನಿತರೆ ಯಾವುದೇ ಕಾರಣದಿಂದ ಖಾಲಿಯಾದಾಗ ಸದರಿ ಶಾಖಾಧಿಕಾರಿ ಹುದ್ದೆಗಳನ್ನು ಅಧೀಕ್ಷಕರ ಹುದ್ದೆಗೆ ತಂತಾನೆ ಇಳಿಯುತ್ತವೆ ಎಂದು ನಮೂದಿಸಿರುವುದನ್ನು ತೆಗೆದುಹಾಕಿ ಸದರಿ 6 ಹುದ್ದೆಗಳನ್ನು ಮುಂದುವರಿಸುವಂತೆ ಸ್ಪಷ್ಟ ಆದೇಶ, ನಿರ್ದೇಶಕರು ಕೋರಿದ್ದರ ಮೇರೆಗೆ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 465 ಡಿಪಿಐ 2005, ಬೆಂಗಳೂರು, ದಿನಾಂಕ: 20ನೇ ಜೂನ್ 2006**

ಪದವಿ ಪೂರ್ವ ಶಿಕ್ಷಣ ಇಲಾಖೆಯ ಜಿಲ್ಲಾ ಕಛೇರಿಗಳಲ್ಲಿರುವ 6 ಶಾಖಾಧಿಕಾರಿ ಹುದ್ದೆಗಳನ್ನು ಕೇಂದ್ರ ಕಛೇರಿಗೆ ಸ್ಥಳಾಂತರಿಸಿದ ಆದೇಶದ ಸಂಖ್ಯೆ: ಇಡಿ 46 ಡಿಪಿಎ 2000 ದಿ: 10.2.2004 ರಲ್ಲಿ 6 ಶಾಖಾಧಿಕಾರಿ ಹುದ್ದೆಗಳು ಅದರಲ್ಲಿ ಕಾರ್ಯನಿರ್ವಹಿಸುತ್ತಿರುವವರ ನಿವೃತ್ತಿ ಅಥವಾ ಬಡ್ತಿ ಇನ್ನಿತರೆ ಯಾವುದೇ ಕಾರಣದಿಂದ ಹುದ್ದೆ ಖಾಲಿಯಾದಾಗ ಸದರಿ ಶಾಖಾಧಿಕಾರಿ ಹುದ್ದೆಗಳು ಅಧೀಕ್ಷಕರ ಹುದ್ದೆಗೆ ತಂತಾನೆ ಇಳಿಯುತ್ತವೆ ಎಂದು ನಮೂದಿಸಿರುವುದನ್ನು ತಿದ್ದುಪಡಿ ಮಾಡಿ ಸದರಿ 6 ಶಾಖಾಧಿಕಾರಿಗಳ ಹುದ್ದೆಗಳನ್ನು ಹಾಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ (incumbent) ಸಮೇತ ಕೇಂದ್ರ ಕಛೇರಿಗೆ ಸ್ಥಳಾಂತರಿಸಿ, ಮುಂದುವರಿಸಿ ಆದೇಶಿಸಿದೆ.

ಶಾಖಾಧಿಕಾರಿ ಹುದ್ದೆಗಳ ಸ್ಥಳಾಂತರದ ನಂತರ ಜಿಲ್ಲಾ ಕಛೇರಿಗಳಿಗೆ ನಿಗದಿಪಡಿಸಿದ ಸಿಬ್ಬಂದಿ ನಮೂನೆಯಲ್ಲಿ ಈಗಾಗಲೇ ಇರುವಂತೆ ಆಯಾ ಜಿಲ್ಲಾ ಕಛೇರಿನಲ್ಲಿ ಅಧೀಕ್ಷಕರ ಹುದ್ದೆಗಳು ಮುಂದುವರಿಯುತ್ತವೆ.

ಕೇಂದ್ರ ಕಛೇರಿಗೆ ಶಾಖಾಧಿಕಾರಿ ಹುದ್ದೆಗಳನ್ನು ಸ್ಥಳಾಂತರಿಸಿದ ನಂತರ ಕಡತಗಳ ಚಾಲನೆಗೆ ಹೊಸದೊಂದು ಹಂತ ಸೇರಿಸಿ ಕಡತಗಳ ಶೀಘ್ರ ವಿಲೇವಾರಿಗೆ ಧಕ್ಕೆಯಾಗದಂತೆ, ಶಾಖಾಧಿಕಾರಿಗಳು ಕೇಂದ್ರ ಕಛೇರಿಗೆ ಬಂದ ಮೇಲೆ ಅವರಿಗೆ ಸೂಕ್ತ ಪ್ರತ್ಯೇಕ ಕಾರ್ಯನಿರ್ವಹಣೆಯನ್ನು ನಿರ್ದೇಶಕರು ನೀಡತಕ್ಕದ್ದು. ಅಧೀಕ್ಷಕರು ಶಾಖಾಧಿಕಾರಿಯವರಿಗೆ ಕಡತಗಳನ್ನು ಸಲ್ಲಿಸದೇ ಇರುವಂತೆ ಕಾರ್ಯ ಹಂಚಿಕೆ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಈ ಹಿಂದೆ ಟಿಪ್ಪಣಿ ಸಂಖ್ಯೆ: ಆಇ-1112-ವೆಚ್ಚ-8/2003 ದಿನಾಂಕ: 7.1.2004ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ ಎಂ. ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್. 964

**ಸಿಬ್ಬಂದಿ ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶಾಂತ್ರಿ ವೇತನ), ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ,

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 18 ಸಸಿವಿ 97, ದಿನಾಂಕ:20.6.1997.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 97 ದಿನಾಂಕ:27.6.1997
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 28 ಸಸಿವಿ 98 ದಿನಾಂಕ:3.7.1998
4. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 40 ಸಸಿವಿ 98 ದಿನಾಂಕ:30.11.1998
5. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 264 ಎಸ್‌ಎಎಸ್ 98 ದಿನಾಂಕ:10.5.1999
6. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಸಸಿವಿ 99 ದಿನಾಂಕ:1.6.1999
7. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಸಸಿವಿ 99 ದಿನಾಂಕ:16.2.2000
8. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 10 ಸಸಿವಿ 2001 ದಿನಾಂಕ:22.3.2001

9. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 21 ಸಸಿವಿ 2001 ದಿನಾಂಕ:2.5.2001
10. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 31 ಸಸಿವಿ 2002 ದಿನಾಂಕ:23.5.2002
11. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2003 ದಿನಾಂಕ:13.3.2003
12. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 11 ಸಸಿವಿ 2004 ದಿನಾಂಕ: 28.2.2004
13. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸಸಿವಿ 2005 ದಿನಾಂಕ:26.3.2005
14. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 2497 ಪ್ರಕಾ (ಆಸು) 2006, ದಿನಾಂಕ:23.3.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ದಿನಾಂಕ:17.6.1999 ರ ಅಪರಾಹ್ನದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಸರ್ಕಾರದ ವಿಶೇಷ ಕಾರ್ಯದರ್ಶಿ (ಆಡಳಿತ ಸುಧಾರಣೆಗಳು, ತರಬೇತಿ ಮತ್ತು ವಿಶ್ರಾಂತಿ ವೇತನಗಳು) ಹುದ್ದೆಯನ್ನು ಸೃಜಿಸಲಾಗಿದೆ.

| | | |
|---|---|---|
| 1. | ಭಾಷಾಂತರಕಾರರು | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕರು | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |

ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಸೇರ್ಪಡೆಯಲ್ಲಿ ದಿನಾಂಕ:20.6.1997 ರ ಸರ್ಕಾರದ ಆದೇಶದಲ್ಲಿ ಸೃಜಿಸಿರುವ ವಿಶೇಷಾಧಿಕಾರಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರ ಆಪ್ತ ಶಾಖೆಗೆ ಚಾಲಕ ಹುದ್ದೆಯೊಂದನ್ನು ಸೇರ್ಪಡೆ ಮಾಡಲಾಗಿದೆ.

ಕ್ರಮಸಂಖ್ಯೆ (3) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳನ್ನು ದಿನಾಂಕ:17.6.1998 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (4) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ವಿಶೇಷ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ ಮತ್ತು ರಾಜಕೀಯ ವಿಶಾಂತ್ರಿ ವೇತನ) ಈ ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಎಂದು ಮರುಪದನಾಮೀಕರಿಸಲಾಗಿದೆ.

ಕ್ರಮ ಸಂಖ್ಯೆ (6) (7) (8) ರಲ್ಲಿ ಓದಲಾಗಿರುವ ಸರ್ಕಾರದ ಆದೇಶಗಳಲ್ಲಿ ಸದರಿ ಹುದ್ದೆಗಳನ್ನು ದಿನಾಂಕ:31.3.2002 ರವರೆಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (9) ರ ಸರ್ಕಾರದ ಆದೇಶದಲ್ಲಿ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ದಿನಾಂಕ:21.3.2001 ರಿಂದ ಜಾರಿಗೆ ಬರುವಂತೆ ಪ್ರಧಾನ ಕಾರ್ಯದರ್ಶಿ:ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದೆ ಹಾಗೂ ಯಾವ ಯಾವ ಅವಧಿಗೆ ಸದರಿ ಹುದ್ದೆಯ ಪದಧಾರಕರು ಪ್ರಧಾನ ಕಾರ್ಯದರ್ಶಿ ಆಗಿರುವರೋ ಆಯಾ ಅವಧಿಗೆ ಮಾತ್ರ ಇವರ ಆಪ್ತ ಶಾಖೆಗೆ ಶಾಖಾಧಿಕಾರಿ ವೃಂದದ 1 ಆಪ್ತ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದೆ.

ಕ್ರಮ ಸಂಖ್ಯೆ (10) ರಿಂದ (13) ರಲ್ಲಿರುವ ದಿನಾಂಕ:23.5.2002, 13.3.2003, 28.2.2004 ರ ಸರ್ಕಾರಿ ಆದೇಶಗಳಲ್ಲಿ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಹಾಗೂ ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ:1.4.2005 ರಿಂದ 31.3.2006 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (14) ರ ಅನಧಿಕೃತ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಇವರು ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳ ಅವಧಿಯನ್ನು ದಿನಾಂಕ:31.3.2006 ಕ್ಕೆ ಮುಕ್ತಾಯಗೊಂಡಿರುವುದರಿಂದ ಸದರಿ ಹುದ್ದೆಗಳನ್ನು ಪುನಃ ಒಂದು ವರ್ಷದವರೆಗೆ ಮುಂದುವರೆಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 23 ಸಸಿವಿ 2006 ಬೆಂಗಳೂರು, ದಿನಾಂಕ:2ನೇ ಜೂನ್ 2006**

ಸರ್ಕಾರದ ಪ್ರಧಾನ ಕಾರ್ಯದರ್ಶಿ,ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಹಾಗೂ ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ:1.4.2006 ರಿಂದ 31.3.2007 ರವರೆವಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | |
|---|---|
| ಆಪ್ತ ಕಾರ್ಯದರ್ಶಿ<br>(ಆಪ್ತ ಕಾರ್ಯದರ್ಶಿ ಗ್ರೇಡ್-2/ ಪತ್ರಾಂಕಿತ ಆಪ್ತ ಸಹಾಯಕ) | 01 |
| ಶೀಘ್ರಲಿಪಿಗಾರರು<br>(ಪತ್ರಾಂಕಿತ ಆಪ್ತ ಸಹಾಯಕರು)<br>ಹಿರಿಯ ಶೀಘ್ರಲಿಪಿಗಾರರು | 02 |
| ಭಾಷಾಂತರಕಾರರು<br>(ಶಾಖಾಧಿಕಾರಿ/ಹಿರಿಯ ಸಹಾಯಕರು) | 01 |
| ಸಹಾಯಕರು<br>(ಹಿರಿಯ ಸಹಾಯಕರು /ಸಹಾಯಕರು) | 01 |
| ವಾಹನ ಚಾಲಕರು | 01 |
| ದಲಾಯತ್ | 02 |

ದಿನಾಂಕ:10.7.1996 ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಸಹಮತಿಯನ್ನು ಪರಿಭಾವಿಸಿ ಮೇಲ್ಕಂಡ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 965

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ: ಉಪ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ,

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 42 ಸಸಿವಿ 2004, ದಿನಾಂಕ:9.6.2004.
2. ಅನಧಿಕೃತ ಟಿಪ್ಪಣಿ ಸಂಖ್ಯೆ: ಗ್ರಾಅಪ 7 ಎಸ್‌ಇಪಿ (ಉಘ) 2006 ದಿನಾಂಕ:24.5.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ (1) ರಲ್ಲಿ ಓದಲಾದ ದಿನಾಂಕ:9.6.2004 ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ-ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ:ಜಂಟಿ ಕಾರ್ಯದರ್ಶಿ:ಅಪರ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ:25.6.2004 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿರುತ್ತದೆ. ಪ್ರಸ್ತುತ ಈ ವಿಸ್ತರಿತ ಅವಧಿಯ ದಿನಾಂಕ:24.6.2006ಕ್ಕೆ ಮುಕ್ತಾಯಗೊಳ್ಳಲಿದೆ.

ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 24.5.2006ರ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಹುದ್ದೆಯನ್ನು ದಿನಾಂಕ:25.6.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 46 ಸಸಿವಿ 2006, ಬೆಂಗಳೂರು, ದಿನಾಂಕ:15ನೇ ಜೂನ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ-ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ:25.6.2006 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 966

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀಮತಿ ಎನ್.ಎನ್. ಇಂದಿರಾ, ಎಸಿಪಿ, ಶೇಷಾದ್ರಿಪುರಂ ಉಪ ವಿಭಾಗ, ಬೆಂಗಳೂರುರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ /5/13/2005-06, ದಿನಾಂಕ:05.05.2005..
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:03.08.2005
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/5/15/2001-02, ದಿನಾಂಕ:29.08.2005.
4. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 14/ CNS/ 2006, ದಿನಾಂಕ:09.05.2006.

**ಪ್ರಸ್ತಾವನೆ**

ಶ್ರೀಮತಿ ಎನ್.ಎನ್. ಇಂದಿರಾ, ಸಹಾಯಕ ಪೊಲೀಸ್ ಆಯುಕ್ತರು, (ಎಸಿಪಿ) ಶೇಷಾದ್ರಿಪುರಂ, ಉಪ ವಿಭಾಗ , ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1. ದೋಷರೋಪಣೆ:**

"ಚೀನಾದ ಘನವೆತ್ತ ಪ್ರಧಾನ ಮಂತ್ರಿಯವರಾದ ವೆನ್ ಜಿಯಾಬೋರವರು ನಿಮ್ಮ ವ್ಯಾಪ್ತಿಗೆ ಬರುವ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಗೆ ದಿನಾಂಕ:10.04.2005 ರಂದು ಮಧ್ಯಾಹ್ನ 2.30 ಗಂಟೆಗೆ ಬೇಟಿ ನೀಡಿದ ಸಂದರ್ಭದಲ್ಲಿ ನಿಮ್ಮ ಅಧೀನದಲ್ಲಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಸುಬ್ರಮಣ್ಯ, ಪಿ.ಐ. ಸದಾಶಿವನಗರ, ಪೊಲೀಸ್ ಠಾಣೆ, ಬೆಂಗಳೂರು ರವರು ಸೂಕ್ತ ಬಂದೋಬಸ್ತ್ ವ್ಯವಸ್ಥೆಯನ್ನು ನಿಯಮಾನುಸಾರ ಸಮಾರಂಭಕ್ಕೆ ಮುಂಚೆ ಮಾಡಬೇಕಾಗಿದ್ದರೂ ಭದ್ರತಾ ವ್ಯವಸ್ಥೆಯನ್ನು ಸರಿಯಾಗಿ ಮಾಡದೇ, ಇದ್ದುದರಿಂದ ಮತ್ತು ಸೂಕ್ತ ತಪಾಸಣೆಯನ್ನು ನಡೆಸದೆ ಕಾರಣ ಟೆನ್‌ಜಿನ್ ಸನ್ ಡ್ಯೂ ಎಂಬ ವ್ಯಕ್ತಿಯು ಟಿಬೇಟ್‌ನ ಧ್ವಜವನ್ನು ಎತ್ತಿಹಿಡಿದು ಮುಖ್ಯ ಕಟ್ಟಡದ ಮೇಲೆ ಬೀಸುತ್ತಾ ಘೋಷಣೆಯನ್ನು ಕೂಗಿ ದುರ್ನಡತೆ ತೋರಿಸಲು

ಕಾರಣರಾಗಿರುತ್ತಾರೆ. ಮೇಲ್ವಿಚಾರಕರಾದ ನೀವು ಅಗತ್ಯ ಬಂದೋಬಸ್ತ್ ವ್ಯವಸ್ಥೆಯನ್ನು ಮಾಡುವಂತೆ ಸದರಿ ಪಿ.ಐ. ರವರಿಗೆ ಸೂಚನೆ ಹಾಗೂ ಮಾರ್ಗದರ್ಶನ ನೀಡದೇ ಮತ್ತು ಮಾಡಲ್ಪಟ್ಟ ಭದ್ರತೆಯನ್ನು ಪರಿಶೀಲಿಸದೇ ಹಾಗೂ ಮುನ್ನೆಚ್ಚರಿಕೆ ಕ್ರಮ ವಹಿಸದೇ ನಿಷ್ಕಾಳಜಿತನ ತೋರಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಬೇಜಾವಾಬ್ದಾರಿತನ ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:05.05.2005 ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳನ್ನೂ ಪರಿಶೀಲಿಸಲಾಗಿದೆ. ಅತೀ ಗಣ್ಯ ವ್ಯಕ್ತಿಗಳ ಭೇಟಿ ಸಂದರ್ಭದಲ್ಲಿ ಗುಪ್ತದಳ ವಿಭಾಗಕ್ಕೆ ಟಿಬೆಟ್ ಯೂತ್ ಕಾಂಗ್ರೆಸ್‌ರವರು ಚೀನಾ ದೇಶದ ಪ್ರಧಾನಿ ಬಂದಾಗ ಉಪವಾಸ ಸತ್ಯಗ್ರಹ ನಡೆಸಲು ಅನುಮತಿ ಕೋರಿದ್ದು, ಡಿಸಿಪಿ, ಕೇಂದ್ರ ವಿಭಾಗ, ಬೆಂಗಳೂರು ಇವರು ದಿನಾಂಕ:7.4.2005 ರಂದು ತಿರಸ್ಕರಿಸಿ ಹಿಂಬರಹ ನೀಡಿರುತ್ತಾರೆ. ಈ ಮಾಹಿತಿಯನ್ನು ಭದ್ರತೆ ಕಾಪಾಡುವ ಸಂಬಂಧಿತ ಪೊಲೀಸ್ ಠಾಣೆಗಾಗಲಿ ಅಧಿಕಾರಿಗಳಿಗಾಗಲಿ ಮುನ್ನೆಚ್ಚರಿಕೆಯಾಗಿ ಮಾಹಿತಿ ನೀಡಿರುವುದಿಲ್ಲ.

ಅರ್ಜಿದಾರರು ತಮ್ಮ ಕರ್ತವ್ಯ ಲೋಪವಿಲ್ಲದೆ, ಸಭೆ ನಡೆಸಿ, ಯಾರ್‍ಯಾರು ಯಾವ ಯಾವ ಕರ್ತವ್ಯ ಗಳನ್ನು ನಿರ್ವಹಿಸಬೇಕೆಂದು ಸೂಕ್ತ ಮುನ್ನೆಚ್ಚರಿಕೆಗಳನ್ನು ನೀಡಿರುವುದು ಕಂಡುಬರುತ್ತದೆ. ಅರ್ಜಿದಾರರು 29 ವರ್ಷ ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸಿದ್ದು, ಪ್ರಾಮಾಣಿಕತೆ, ನಿಷ್ಠತೆಗೆ ಹೆಸರಾಗಿ, ಇವರ ಅಸಾಧಾರಣ ಸೇವೆಯನ್ನು ಗುರುತಿಸಿ, ರಾಜ್ಯ ಹಾಗು ಕೇಂದ್ರ ಸರ್ಕಾರಗಳು ಮುಖ್ಯ ಮಂತ್ರಿಗಳ ಚಿನ್ನದ ಪದಕ ಹಾಗೂ ರಾಷ್ಟ್ರಪತಿಗಳ ಪದಕವನ್ನು ಪಡೆದಿದ್ದು, ಅನೇಕ ಪ್ರಶಂಸಾ ಪತ್ರಗಳನ್ನು ನಗದು ಬಹುಮಾನಗಳನ್ನು ಪಡೆದಿರುತ್ತಾರೆ.

ಈ ಹಿನ್ನಲೆಯಲ್ಲಿ ಒಬ್ಬ ಮಹಿಳಾ ಅಧಿಕಾರಿಯಾಗಿ, ಇವರು ನಿರ್ವಹಿಸಿರುವ ಕಾರ್ಯಗಳನ್ನು ಪರಿಶೀಲಿಸಿದ ನಂತರ, ಚೀನಾದ ಪ್ರಧಾನ ಮಂತ್ರಿಯವರು ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಗೆ ಭೇಟಿ ನೀಡಿದಾಗ, ಜರುಗಿದ ಭದ್ರತಾ ಲೋಪವು ಒಂದು ದುರದೃಷ್ಟಕರ ಸಂಗತಿಯಾಗಿದ್ದರು, ಇದು ಒಬ್ಬ ಅಧಿಕಾರಿಯ ನಿಷ್ಕಾಳಜಿತನ ಮಾತ್ರ ಆಗಿರದೆ, ಎ.ವಿ.ಐ.ಪಿ., ಕರ್ತವ್ಯಕ್ಕೆ ನಿಯೋಜಿಸಲಾಗಿದ್ದ, ಅನೇಕ ಅಧಿಕಾರಿಗಳ ಸಾಮೂಹಿಕ ಕರ್ತವ್ಯ ವೈಫಲ್ಯತೆ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯ ದಿನಾಂಕ:5.5.2005 ರ ದಂಡನಾದೇಶವನ್ನು ರದ್ದುಪಡಿಸಿ, ಅರ್ಜಿದಾರರ ಮೇಲ್ಮನವಿಯನ್ನು ಪುರಸ್ಕರಿಸಿ, ಇವರ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆಗೊಳಿಸಿ, ಸಕ್ರಮಗೊಳಿಸಲು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:9.5.2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶವನ್ನು ಮಾರ್ಪಾಡಿಸಲು ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 336 ಪೊಸಿಅ 2005, ಬೆಂಗಳೂರು, ದಿನಾಂಕ: 17ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:5.5.2005 ರ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ದಂಡನಾದೇಶವನ್ನು ರದ್ದುಪಡಿಸಿ, ಶ್ರೀಮತಿ ಎನ್.ಎನ್. ಇಂದಿರಾ, ಎಸಿಪಿ, ಶೇಷಾದ್ರಿಪುರಂ, ಉಪ ವಿಭಾಗ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:3.8.2005ರ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ಅಕ್ರಮಗೊಳಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:9.5.2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 967

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ವಿದ್ಯಾನಿಕೇತನ್ ಸಂಸ್ಥೆಯ ಶ್ರೀ ವಿದ್ಯಾ ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ

**ಓದಲಾಗಿದೆ:**
1. ದಿನಾಂಕ:28.12.2003 ರ ಸಂಖ್ಯೆ:ಇಡಿ 332 ಯುಆರ್‌ಸಿ 2003 ರ ಸರ್ಕಾರಿ ಆದೇಶ.
2. ದಿನಾಂಕ:8.2.2006, ಸಂಖ್ಯೆ: F.SRO/NCTE/B.Ed/2005-06/5367ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

**ಪ್ರಸ್ತಾವನೆ**

1. ಸರ್ಕಾರಿ / ವಿಶ್ವವಿದ್ಯಾಲಯ/ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2. ಉಲ್ಲೇಖ (1) ರಲ್ಲಿರುವ ಸರ್ಕಾರಿ ಪತ್ರದಲ್ಲಿ ಬೆಂಗಳೂರಿನ ವಿದ್ಯಾನಿಕೇತನ್ ಸಂಸ್ಥೆಯ ಶ್ರೀ ವಿದ್ಯಾ ಕಾಲೇಜ್ ಆಫ್ ಎಜುಕೇಷನ್ ಅನ್ನು ಸ್ಥಾಪಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ:8.2.2006ರ ಆದೇಶದಲ್ಲಿ ಎನ್.ಸಿ.ಟಿ.ಇ.ಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 125 ಯುಬಿವಿ 2006, ಬೆಂಗಳೂರು, ದಿನಾಂಕ: 14ನೇ ಜೂನ್ 2006**

3. ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000 ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999 ರ 2(1) ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ವಿದ್ಯಾನಿಕೇತನ್ ಸಂಸ್ಥೆಯ ಶ್ರೀ ವಿದ್ಯಾ ಕಾಲೇಜ್ ಆಫ್ ಎಜುಕೇಷನ್‌ನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 968

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ: ಕೇಂದ್ರ ಕಛೇರಿ-ಗೋಕುಲ ರಸ್ತೆ-ಹುಬ್ಬಳ್ಳಿ**

**ಸುತ್ತೋಲೆ**

**ಸಂ:ವಾಕರಸಾ:ಕೇಕ:ಹು:ಸಿಬ್ಬಂದಿ:ಸಿ2:946, ದಿನಾಂಕ: 20ನೇ ಜೂನ್ 2006**

**ಉಲ್ಲೇಖ:** 1. ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಾರಿಇ 49 ವಾಈಸೇ /2006 ದಿನಾಂಕ:17.06.2006

2. ಸಾಮಾನ್ಯ ಸಿಬ್ಬಂದಿ ಆದೇಶ ಸಂಖ್ಯೆ ಜಿ-7955 ದಿ:17.06.2006

ಉಲ್ಲೇಖಿತ ಆದೇಶದ ಮೇರೆಗೆ ನಾನು ವಾ.ಕ.ರ.ಸಾ.ಸಂಸ್ಥೆ ಕೇಂದ್ರ ಕಛೇರಿ, ಹುಬ್ಬಳ್ಳಿಯಲ್ಲಿ ದಿನಾಂಕ: 19.06.2006 ರಂದು ವ್ಯವಸ್ಥಾಪಕ ನಿರ್ದೇಶಕ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡಿರುತ್ತೇನೆ.

ನನ್ನ ಕಾರ್ಯ ವ್ಯಾಪ್ತಿಗೆ ಸಂಬಂಧಿಸಿದ ಎಲ್ಲಾ ಗೌಪ್ಯ ಹಾಗೂ ಅರೆ ಸರಕಾರಿ ಪತ್ರಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಲು ಕೋರುತ್ತೇನೆ.

ಎನ್.ಕೆ. ಪರಮೇಶ್. ವ್ಯವಸ್ಥಾಪಕ ನಿರ್ದೇಶಕರು, ವಾ.ಕ.ರ.ಸಾ.ಸಂಸ್ಥೆ, ಕೇಂದ್ರ ಕಛೇರಿ, ಗೋಕುಲ ರಸ್ತೆ, ಹುಬ್ಬಳ್ಳಿ-580030

**ಎನ್. ಕೆ. ಪರಮೇಶ್**

ಪಿ.ಆರ್. 969

ವ್ಯವಸ್ಥಾಪಕ ನಿರ್ದೇಶಕರು

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಮಾನ್ಯ ಕೃಷಿ ಮಾರುಕಟ್ಟೆ ಸಚಿವರು ಆಪ್ತ ಶಾಖೆಯಲ್ಲಿ ಅಸ್ತಿತ್ವದಲ್ಲಿರುವ ಗ್ರೂಫ್ 'ಸಿ' ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಗ್ರೂಫ್ 'ಎ' ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಮಾನ್ಯ ಕೃಷಿ ಮಾರುಕಟ್ಟೆ ಸಚಿವರ ಟಿಪ್ಪಣಿ ಸಂಖ್ಯೆ:ಕೃಮಾಸ/ ಟಿ/136/2006. ದಿ:20.4.06.

**ಪ್ರಸ್ತಾವನೆ:**

ಮಾನ್ಯ ಕೃಷಿ ಮಾರುಕಟ್ಟೆ ಸಚಿವರ ಮೇಲೆ ಓದಲಾದ ದಿನಾಂಕ:20.4.2006ರ ಟಿಪ್ಪಣಿಯಲ್ಲಿ ಶ್ರೀ ಬಿ.ಎಸ್. ಜಾಪಾಲಿ, ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ತಮ್ಮ ಆಪ್ತ ಶಾಖೆಯಲ್ಲಿ ಪ್ರಸ್ತುತ ಖಾಲಿ ಇರುವ ಒಂದು ಆಪ್ತ ಸಹಾಯಕರ ಹುದ್ದೆಯನ್ನು ಅಧೀನ ಕಾರ್ಯದರ್ಶಿ ಮಟ್ಟದ ಹುದ್ದೆಗೆ ಉನ್ನತೀಕರಿಸಿ ಆ ಹುದ್ದೆಗೆ ವಿಶೇಷಾಧಿಕಾರಿಯಗಿ ಸ್ಥಳ ನಿಯುಕ್ತಿಗೊಳಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಉದ್ದೇಶಕ್ಕಾಗಿ ಮಾನ್ಯ ಕೃಷಿ ಮಾರುಕಟ್ಟೆ ಸಚಿವರ ಆಪ್ತ ಶಾಖೆಯಲ್ಲಿ ಪ್ರಸ್ತುತ ಲಭ್ಯವಿರುವ ಗ್ರೂಪ್ 'ಸಿ' ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಗ್ರೂಫ್ 'ಎ' ಹುದ್ದೆಯನ್ನಾಗಿ ಉನ್ನತೀಕರಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 154 ಸಅಸೇ 2006, ಬೆಂಗಳೂರು, ದಿನಾಂಕ: 23ನೇ ಜೂನ್ 2006**

ಶ್ರೀ ಬಿ.ಎಸ್. ಜಾಪಾಲಿ, ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಮಾನ್ಯ ಕೃಷಿ ಮಾರುಕಟ್ಟೆ ಸಚಿವರ ವಿಶೇಷಾಧಿಕಾರಿಯನ್ನಾಗಿ ನೇಮಿಸುವ ಸಲುವಾಗಿ ಮಾನ್ಯ ಸಚಿವರ ಆಪ್ತ ಶಾಖೆಗೆ ಮಂಜೂರಾಗಿರುವ 4 ಗ್ರೂಫ್ 'ಸಿ' ಹುದ್ದೆಗಳಲ್ಲಿ ಒಂದು ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಶ್ರೀ ಬಿ.ಎಸ್. ಜಾಪಾಲಿ, ಅಧೀನ ಕಾರ್ಯದರ್ಶಿ ಇವರ ಸೇವೆಯು ಮಾನ್ಯ ಸಚಿವರ ಆಪ್ತ ಶಾಖೆಯಲ್ಲಿ ಅವಶ್ಯವಿರುವವರೆಗೆ ಅಥವಾ ಮಾನ್ಯ ಸಚಿವರ ಪದಾವಧೀಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಗ್ರೂಫ್ 'ಎ' ದರ್ಜೆಗೆ ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಆಇ 980 ವೆಚ್ಚ -5/2006, ದಿನಾಂಕ:15.6.2006 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 970

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಹೊಂಬಯ್ಯ, ನಿವೃತ್ತ ಜಿಲ್ಲಾ ಖಜಾನಾಧಿಕಾರಿ, ಶ್ರೀ ಡಿ. ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್, ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿಯ ನೇಮಕ ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 41 ಎಸ್‌ಇಎನ್ 41 ಎಸ್‌ಇಎನ್ 04 ದಿನಾಂಕ:22.04.06.

2. ಶ್ರೀ ಶ್ರೀನಿವಾಸ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರ ದಿನಾಂಕ:25.05.06 ರ ಪತ್ರ.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಶ್ರೀ ಮಹಮ್ಮದ್‌ಗೌಸ್, ಕೆಎಎಸ್ ಅಧಿಕಾರಿ ಅವರು ಕೇಂದ್ರಸ್ಥಾನಿಕ ಸಹಾಯಕರ ಹುದ್ದೆಯಲ್ಲಿ ಶ್ರೀ ಹೊಂಬಯ್ಯ, ಜಿಲ್ಲಾ ಖಜಾನಾಧಿಕಾರಿ ಅವರು ಜಿಲ್ಲಾ ಖಜಾನಾಧಿಕಾರಿಯ ಹುದ್ದೆಯಲ್ಲಿ ಹಾಗೂ ಶ್ರೀ ಡಿ. ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್ ಅವರು ಶಿರಸ್ತೇದಾರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಚಾಮರಾಜನಗರ ಜಿಲ್ಲೆಗೆ 2001-02ನೇ ಸಾಲಿನಲ್ಲಿ ಆಡಳಿತ ಮಟ್ಟದ ಉನ್ನತೀಕರಣಕ್ಕಾಗಿ ಹಾಗೂ ಕಛೇರಿಯ ಆಧುನೀಕರಣ ಸಂಬಂಧ ಪೀಠೋಪಕರಣಗಳು, ಯಂತ್ರೋಪಕರಣಗಳು ಹಾಗೂ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ನೀತಿ ನಿಯಮಗಳನ್ನು ಉಲ್ಲಂಘಿಸಿ ಅನುದಾನ ಬಿಡುಗಡೆ ಮಾಡುವುದರ ಮೂಲಕ ಹಣ ದುರುಪಯೋಗ ಮಾಡಿಕೊಂಡ ಆರೋಪದ ಸಂಬಂಧ ಅವರುಗಳ ಮೇಲೆ ಹೊರಿಸಲಾದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ:22.4.06ರ ಸರ್ಕಾರ ಆದೇಶದಲ್ಲಿ ಶ್ರೀ ಶ್ರೀನಿವಾಸ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಯಿತು.

ಶ್ರೀ ಶ್ರೀನಿವಾಸ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ:25.5.06 ರ ಮನವಿಯಲ್ಲಿ ಇತ್ತೀಚೆಗೆ ತಮಗೆ ಉಂಟಾದ ಮಂಡಿ ನೋವಿನ ಕಾರಣ ವಿಚಾರಣಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಆಗುತ್ತಿಲ್ಲವೆಂದು ತಿಳಿಸಿ ಈ ಜವಾಬ್ದಾರಿಯಿಂದ ತಮ್ಮನ್ನು ಮುಕ್ತಗೊಳಿಸುವಂತೆ ಕೋರಿದ್ದಾರೆ. ಅವರ ಮನವಿಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 41 ಎಸ್‌ಇಎನ್ 04, ಬೆಂಗಳೂರು, ದಿನಾಂಕ: 21ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ, 214ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11 (2) ಹಾಗೂ ಅದೇ ನಿಯಮಾವಳಿಯ 13 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ದಿನಾಂಕ:22.4.06ರ ಆದೇಶವನ್ನು ಮಾರ್ಪಡಿಸಿ ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಹೊಂಬಯ್ಯ, ನಿವೃತ್ತ ಜಿಲ್ಲಾ ಖಜಾನಾಧಿಕಾರಿ, ಶ್ರೀ ಡಿ. ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್ ಅವರುಗಳ ಮೇಲೆ ಹೊರಿಸಲಾದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 2005 ದಿನಾಂಕ:23.8.2005 ರಂತೆ ರೂ. 6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:4.3.2002 ರಂತೆ ರೂ. 1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಚಾಮರಾಜನಗರ ಜಿಲ್ಲಾಧಿಕಾರಿಯವರ ಕೇಂದ್ರ ಸ್ಥಾನಿಕ ಸಹಾಯಕರೇ ಮಂಡನಾಧಿಕಾರಿಯಾಗಿ ಮುಂದುವರಿಯುತ್ತಾರೆ. ವಿಚಾರಣೆಯನ್ನು ಬೆಂಗಳೂರಿನಲ್ಲಿ ನಡೆಸಲು ಅಗತ್ಯ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ, ಸ್ಟೇಷನರಿ ಇತ್ಯಾದಿಗಳನ್ನು ಒದಗಿಸಲು ಜಿಲ್ಲಾಧಿಕಾರಿ, ಬೆಂಗಳೂರು ನಗರ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 971

## TRANSPORT SECRETARIAT

**Sub:** Issue of separte Sub-Head of Account regarding Collection of Service Tax.

**Read:**
1. U.O. Note No.FD 9 CSL 2006, dated:16.02.2006.
2. Govt. of India letter No. Va/65/2005-06 BZU, dated:1.3.2006.
3. Transport Commissioner letter No. TC/tax /vyv-438/2005-06, dated :06.05.2006.

**Preamble:-**

The Finance Department in its U.O.Note read at (1) above, has requested to take necessary action to collect and pay service tax in respect of Technical Inspection and certification services.

In letter read at (2) above the Joint Director, Directorate General of Central Excise, Intelligence, Bangalore has requested the Transport Commissioner, Transport Department, Government of Karnataka, that the Technical Inspection and certification services are taxable from 01.07.2003 as per Finance Act, 1994 and that Service tax is livable on any agency or person engaged in providing such services.

The Transport Commissioner in his letter read at (3) above has requested to the Govt., to allot a separate Sub-Head of account regarding collection of Service Tax on issuance of Fitness Certificate by collecting prescribed fee from the vehicle owners, and a separate head of account to transfer service tax payable to Government of India directly from the treasury on or before 5th every month.

The proposal has been examined by the Govt., in detail and the following order has been issued.

**Government order No. TRD 129 SAEPA 2006, Bangalore, Dated:20th June 2006.**
**(Unique No. TRD 14/2006, Dated:15th June 2006)**

Government are pleased to accord permission for collection of Service tax on motor vehicles under the head of account "0041-00-800-0-03 service tax" The Service tax collection have to be passed on the Government of India and the head of account for transfer of service tax collected to the centre will be "2041-00-800-0-02" service tax collections payable to centre.

This order issues with the concurrence of the Finance Department vide U.O. Note No. FD607 Exp-6/2006, dated:24.05.2006.

By Order and in the name of the Governor of Karnataka,

P.R. 972

**SHIVARAMASHETTY**

Disk Officer, Transport Department.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಬಿ.ಎಂ. ನಾಗರಾಜ್, ಸಿಹೆಚ್‌ಸಿ - 164, ಮಂಡ್ಯ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ,ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/ಡಿಇ-12/2003-04, ಒಬಿ ಸಂಖ್ಯೆ:61/2004-05, ದಿನಾಂಕ: 23.6.2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/11/2004-05, ದಿನಾಂಕ:12.1.2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 20.4.2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/68/ 2005. ದಿನಾಂಕ:27.9.2005.

**ಪ್ರಸ್ತಾವನೆ**

ಶ್ರೀ ಬಿ.ಎಂ. ನಾಗರಾಜು, ಸಿಹೆಚ್‌ಸಿ-164, ಮಂಡ್ಯ ಗ್ರಾಮಾಂತರ ಪೊಲೀಸ್ ಠಾಣೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**1. ದೋಷರೋಪಣೆ:**

" ನೀವು ಕೆ.ಆರ್. ಸಾಗರ ಪೊಲೀಸ್ ಠಾಣೆ, ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ:2.8.2003ರಂದು ಸಿಪಿಸಿ-139 ಶ್ರೀ ಪಿ.ಡಿ. ಚಲುವೇಗೌಡ, ರವರೊಡನೆ ನೀವು ವಾಹನ ಪಾರ್ಕಿಂಗ್ ಸ್ಥಳದಲ್ಲಿದ್ದು ಅವರೊಡನೆ ವಾಹನ ಪಾರ್ಕಿಂಗ್ ಚಾರ್ಜ್ ರೂ. 10.00 ಗಳನ್ನು ಕಾನೂನು ಬಾಹಿರವಾಗಿ ವಸೂಲು ಮಾಡುತ್ತಿದ್ದಾಗ ವೀಡಿಯೋ ಚಿತ್ರಣವನ್ನು ತೆಗೆದುಕೊಳ್ಳಲಾಗಿರುತ್ತದೆ. ಹಾಗೂ ನಿಷೇಧಿತ ಸ್ಥಳವಾದ ಡ್ಯಾಂ ಒಳಾಂಗಣ ಪ್ರವೇಶಕ್ಕೆ ಪ್ರವಾಸಿ ಬಸ್ಸು ಹಾಗೂ ಮ್ಯಾಕ್ಸಿ ಕ್ಯಾಬ್ ವಾಹನಗಳನ್ನು ಅನಧೀಕೃತವಾಗಿ ಬಿಡಲು ಹಣವನ್ನು ವಸೂಲಿಸುತ್ತಿದ್ದೀರಿ, ಹೀಗೆ ನೀವು ಸರ್ಕಾರಿ ಕರ್ತವ್ಯ ನಿರ್ವಹಿಸುವಾಗ ಅನಧೀಕೃತವಾಗಿ ಹಣವನ್ನು ವಸೂಲಿಸಿ, ಜನರನ್ನು ವಂಚಿಸುವುದರ ಮೂಲಕ ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿಯನ್ನು ಒಪ್ಪದೆ ಅರ್ಜಿದಾರರು ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:23.6.2004 ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:12.1.2005 ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ತನ್ನ ಸಹೋದ್ಯೋಗಿ ಅಕ್ರಮವಾಗಿ ಅನಧೀಕೃತವಾಗಿ ಹಣ ವಸೂಲಿ ಮಾಡುತ್ತಿದ್ದರು ಅದನ್ನು ತಡೆಯದೇ, ಮೇಲಧಿಕಾರಿಗಳಿಗೆ ತಿಳಿಸದೇ, ಇರುವುದು ಇದರ ದುರ್ನಡತೆಗೆ ಸಾಕ್ಷಿ ಆಗಿರುತ್ತದೆ. ಇದರ ಮೇಲೆ ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿಲ್ಲದಿದ್ದರೂ, ವಿಡಿಯೋ ಚಿತ್ರೀಕರಣದಲ್ಲಿ ಆರೋಪಿಯ ಪಕ್ಕದಲ್ಲಿಯೇ ನಿಂತಿರುವುದು ಸ್ಪಷ್ಟವಾಗಿದೆ ಹಾಗೂ ಈ ಬಗ್ಗೆ 'ದಿ ಹಿಂದೂ' ಪತ್ರಿಕೆಯಲ್ಲಿ ವರದಿ ಸಹ ಪ್ರಕಟವಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇವರೂ ಸಹ ಕೃತ್ಯದಲ್ಲಿ ಭಾಗಿಯಾಗಿರುವುದಾಗಿ ಸಂಶಯಕ್ಕೆ ಎಡೆಮಾಡಿಕೊಟ್ಟಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ದಂಡನೆ ವಿಧಿಸಿದ್ದು, ಈ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 351ಪೊಸಿಅ 2005, ಬೆಂಗಳೂರು, ದಿನಾಂಕ:16ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎಂ. ನಾಗರಾಜು, ಸಿಹೆಚ್‌ಸಿ-164 ಮಂಡ್ಯ ಗ್ರಾಮಾಂತರ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:20.4.2005 ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 973

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಂ.ಎಲ್. ಮಹದೇವಯ್ಯ ಹಿಂದಿನ ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ, ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಮಂಡನಾಧಿಕಾರಿ ಬದಲಾಯಿಸುವ ಬಗ್ಗೆ

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ. 12. ಎಡಿಇ:2005, ದಿನಾಂಕ:14.11.2005
2. ಚಿತ್ರದುರ್ಗ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ:ಸಿಸಿಎ:ಸಿಆರ್/3/2005-06, ದಿನಾಂಕ:23.3.2006.

**ಪ್ರಸ್ತಾವನೆ**

ಶ್ರೀ ಎಂ.ಎಲ್. ಮಹದೇವಯ್ಯ ಹಿಂದಿನ ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ, ಹಾಲಿ ನಿವೃತ್ತರು ಇವರು ಸದರಿ ತಾಲ್ಲೂಕಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಚಳ್ಳಕೆರೆ ಪಟ್ಟಣದ ಶ್ರೀ ಎಸ್.ಜೆ. ವೆಂಕಟೇಶ ಬಿನ್ ಎಸ್. ಜಯಣ್ಣ ಎಂಬುವವರಿಗೆ ಕಾನೂನು ಬಾಹಿರವಾಗಿ ಜಾತಿ ದೃಢೀಕರಣ ಪತ್ರವನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಯುಡಿಡಿ113ಎಂಎಲ್ಆರ್ 2001, ದಿ:1.12.2001 ರನ್ವಯ ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ: ಎಸ್ ಡಬ್ಲೂಡಿ: 150:ಬಿಸಿಎ:94, ದಿನಾಂಕ: 17.7.94 ಹಾಗೂ ಆರ್.ಡಿ.ಸಿ.5 ಝಡ್.ಪಿ.ಎಸ್. 95/1, ದಿನಾಂಕ:13.1.95 ರ ಕರ್ನಾಟಕ ರಾಜ್ಯ ಪತ್ರದಲ್ಲಿನ ಆದೇಶವನ್ನು ಉಲ್ಲಂಘಿಸಿ ಅವರ ಅಧಿಕಾರ ವ್ಯಾಪ್ತಿ ಮೀರಿ ದಿನಾಂಕ:7.12.2001 ರಂದು ಹಿಂದೂ ಜೈನ್ ಜಾತಿಗೆ ಸೇರಿದ ವ್ಯಕ್ತಿಯೊಬ್ಬರಿಗೆ ಬೋಗಾರ ಎಂದು ಜಾತಿ ದೃಢೀಕರಣ ಪತ್ರವನ್ನು ನೀಡಿರುವರೆಂಬ ಕಾರಣಕ್ಕಾಗಿ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ:14.11.2005 ರ ಆದೇಶದಲ್ಲಿ ಶ್ರೀ ಎಸ್.ಸಿ. ಲಕ್ಷ್ಮಿನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ರವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಚಿತ್ರದುರ್ಗ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಕೇಂದ್ರಸ್ಥಾನಿಕ ಸಹಾಯಕರು ಕೇಂದ್ರ ಸ್ಥಾನದಲ್ಲಿ ಅವಶ್ಯವಿದ್ದು ಇವರನ್ನು ಮಂಡನಾಧಿಕಾರಿಗಳಾಗಿ ನೇಮಿಸಿರುವ ಆದೇಶದ ಬದಲಿಗೆ ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಚಿತ್ರದುರ್ಗ ಇವರನ್ನು ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಿಸಿ ಸೂಕ್ತ ಆದೇಶ ಹೊರಡಿಸುವಂತೆ ಮೇಲೆ ಕ್ರ. ಸಂ(2) ರ ದಿನಾಂಕ:23.3.2006 ರ ಪತ್ರದಲ್ಲಿ ಚಿತ್ರದುರ್ಗ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ.12.ಎ.ಡಿ.ಇ.2005, ಬೆಂಗಳೂರು, ದಿನಾಂಕ:16ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ.12.ಎ.ಡಿ.ಇ:2005, ದಿನಾಂಕ:14.11.2005ರಲ್ಲಿ ಶ್ರೀ ಎಂ.ಎಲ್. ಮಹದೇವಯ್ಯ, ಹಿಂದಿನ ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿ ಶಿಸ್ತು ಪ್ರಾಧಿಕಾರದವರ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 (5) ರನ್ವಯ ಚಿತ್ರದುರ್ಗ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿರುವುದನ್ನು ಬದಲಾಯಿಸಿ ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಚಿತ್ರದುರ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 974

## ಒಳಾಡಳಿತ ಸಚಿವಾಲಯ

**ವಿಷಯ:** ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು ಜಿಲ್ಲೆ, ರಾಯಚೂರು ಈ ಸಂಸ್ಥೆಗೆ ಸಲಹಾ ಸಮಿತಿ ಸದಸ್ಯರನ್ನು ನೇಮಕ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 10 ಮುನೊಸೊ 2001(ಭಾ) ದಿನಾಂಕ:13.2.2002.
2. ಸರ್ಕಾರಿ ಆದೇಶ ಸಂಖ್ಯೆ: ಕಂಇ 10 ಮುನೊಸೊ 2001 (ಭಾ) ದಿನಾಂಕ:14.2.2003 ಹಾಗೂ 2.7.2003.

**ಪ್ರಸ್ತಾವನೆ**

ಮೇಲೆ ಓದಲಾದ (1) ರ ಆದೇಶದಲ್ಲಿ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು ಈ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿದ್ದು ಓದಲಾದ (2) ರ ಆದೇಶದಲ್ಲಿ ಆಡಳಿತಾಧಿಕಾರಿ ಸಹಾಯಕ್ಕಾಗಿ ಸಲಹಾ ಸಮಿತಿ ನೇಮಕ ಮಾಡಲಾಗಿತ್ತು. ಸದರಿ ಸಲಹಾ ಸಮಿತಿಗೆ ನೇಮಕ ಮಾಡಲಾಗಿದ್ದ ಅಧಿಕಾರೇತರ ಸದಸ್ಯರನ್ನು ಬದಲಾಯಿಸಲು ಸರ್ಕಾರವು ತೀರ್ಮಾನಿಸಿದ್ದು ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಮುನೊಸೊ 2004 ಬೆಂಗಳೂರು, ದಿನಾಂಕ: 19ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 10 ಮುನೊಸೊ 2001 (ಭಾ), ದಿನಾಂಕ:14.2.2003 ಮತ್ತು 2.7.2003 ರಲ್ಲಿ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು ಈ ಸಂಸ್ಥೆಗೆ ನೇಮಕವಾದ ಆಡಳಿತಾಧಿಕಾರಿ ಸಹಾಯಕ್ಕಾಗಿ ನೇಮಕ ಮಾಡಿದ ಅಧಿಕಾರೇತರ 17 ಸದಸ್ಯರ ಸದಸ್ಯತ್ವವನ್ನು ರದ್ದುಪಡಿಸಿದೆ ಹಾಗೂ ಈ ಸಂಸ್ಥೆಗೆ ಈ ಒಳಗೆ ನಮೂದಿಸಿದ ವರನ್ನೊಳಗೊಂಡ ಹೊಸ ಸಲಹಾ ಸಮಿತಿಯನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 (5ಎ) ಪ್ರಕಾರ ಮುಂದಿನ ಆದೇಶದವರೆಗೆ ನೇಮಿಸಿದೆ.

1. ಮಾಚನೂರು ಮಲ್ಲಿಕಾರ್ಜುನ ತಂದೆ ಬಸ್ಸನಗೌಡ ಮ,ನಂ. 12.11.7, ಎಸ್ಎನ್‌ಟಿ ಟಾಕೀಸ್ ಎದುರುಗಡೆ, ರಾಯಚೂರು.
2. ಮಹ್ಮದ್ ಅನ್ವರ್‌ಖಾನ್ ತಂದೆ ದಾದ್ ಮಹ್ಮದ್‌ಖಾನ್ ಮ.ನಂ. 1.4.90/16, ರಾಧಾಕೃಷ್ಣ ಲೇಔಟ್, ಜ್ಯೋತಿ ಕಾಲೋನಿ, ರಾಯಚೂರು.
3. ಮಂಚಾಲ್ ಶ್ರೀನಿವಾಸ ತಂದೆ ಮಂಚಾಲ್ ನಾರಾಯಣಪ್ಪ ಮ.ನಂ. 7.5.210, ಜವಾಹರ ನಗರ, ರಾಯಚೂರು.
4. ಸಂಪತ್ ಕುಮಾರ್ ಇನ್ನಾಣಿ ತಂದೆ ದೇವಿ ಕಿಷನ್ ಇನ್ನಾಣಿ ಮ.ನಂ. 5.1.36, ನೇತಾಜಿ ನಗರ, ರಾಯಚೂರು.

5. ದರೂರು ಚನ್ನಬಸನಗೌಡ ತಂದೆ ಬಸ್ಸನಗೌಡ ಮ.ನಂ. 3.6.24, ಬೇರೂನ್‌ಕಿಲ್ಲಾ, ರಾಯಚೂರು.
6. ಚಂದ್ರಕಾಂತ ತಂದೆ ಗುರುಲಿಂಗಪ್ಪ ಮೊನಳ್ಳಿ ಮ.ನಂ. 10.2.65/2, ಮಕ್ತಲ್‌ಪೇಟೆ, ರಾಯಚೂರು.
7. ಡಿ.ವೀರೇಶ್ ಕುಮಾರ ತಂದೆ ಡಿ. ಲಕ್ಷ್ಮಯ್ಯ ಮ.ನಂ. 8.11.180/241, ವಿದ್ಯಾನಗರ, ರಾಯಚೂರು.
8. ಜಿ.ಟಿ. ರೆಡ್ಡಿ ತಂದೆ ಚಿನ್ನಯ್ಯ, ವಕೀಲರು ಮ.ನಂ. 9.19.9, ಮಡ್ಡಿಪೇಟೆ, ರಾಯಚೂರು.
9. ವೀರಗುಂಡಯ್ಯಸ್ವಾಮಿ ಹಿರೇಮಠ ತಂದೆ ವೀರಲಿಂಗಯ್ಯಸ್ವಾಮಿ ಹಿರೇಮಠ ವಕೀಲರು, ಮ.ನಂ. 1.11.41, ಅಸ್ಕಿಹಾಳ್ ಗೇಟ್, ನಿಜಲಿಂಗಪ್ಪ ಕಾಲೋನಿ, ರಾಯಚೂರು.
10. ಕುರುಮರೆಡ್ಡಿ ತಂದೆ ದೊಡ್ಡ ಜಂಬಣ್ಣ ಮ.ನಂ. 9.15.53, ಮಡ್ಡಿಪೇಟೆ, ರಾಯಚೂರು.
11. ಜಿ.ಆರ್. ವಾದಿರಾಜಗೌಡ ತಂದೆ ಬಿ.ಆರ್. ಗುರುರಾಜಗೌಡ ಸಾ:ರಾಂಪೂರು, ತಾ:ರಾಯಚೂರು.
12. ಹಸ್ಮುಖ್‌ಪಟೇಲ್ ತಂದೆ ಹರಜಿ ಆರ್. ಪಟೇಲ್, ಪಟೇಲ್ ನಿವಾಸ, ಸಿಯಾ ತಲಾಬ್, ರಾಯಚೂರು.
13. ಜಿ. ಸುಬಾಷ ತಂದೆ ನರಸಿಮಲು, ಮ.ನಂ. 12.6.250, ಎಲ್.ಬಿ.ಎಸ್. ನಗರ, ರಾಯಚೂರು.
14. ತಿರುಮಲರಾವ್ ಕುಲಕರ್ಣಿ ತಂದೆ ನರಸಿಂಗರಾವ್ ಕಾಡ್ಲೂರು ಬೇರೂನ್ ಕಿಲ್ಲಾ, ರಾಯಚೂರು.
15. ಎಂ. ಶೀಕರರೆಡ್ಡಿ ತಂದೆ ಅಂಜನೇಯ ಮ.ನಂ. 12.1.360/394, ನೀರಭಾವಿಕುಂಟ, ರಾಯಚೂರು.
16. ಕೆ. ಪ್ರಭುದೇವ ಪಾಟೀಲ್ ಮೀರಾಪೂರ ತಂದೆ ಕೆ. ಮಹಾದೇವಪ್ಪಗೌಡ ವಕೀಲರು, ಮ.ನಂ. 8.11.89, ಎನ್. ಜಿ.ಓ. ಕಾಲೋನಿ, ರಾಯಚೂರು.
17. ಶ್ರೀಮತಿ ಶೀಲಾ ಜಹಗೀರದಾರ ಗಂಡ ಗುರುಚಾರ ಜಹಗೀರದಾರ ಮ.ನಂ. 3.3.105/2, ಬೇರೂನ್ ಕಿಲ್ಲಾ, ರಾಯಚೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 975

**ಶಿವಲಿಂಗ**

ಪೀಠಾಧಿಕಾರಿ, ಒಳಾಡಳಿತ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## FOREST, ECOLOGY AND ENVIRONMENT SECRETARIAT

**Sub:** Constitution of Committee to ensure implementation of the Condtions imposed in the Environment a Clearance issued by the Ministry of Environmental and Forests. Gover nment of India

**Read:** Environment impact Assessment Notification No S.o. 60 (E) dated 27.1.1994.

**Preamble:-**

Ministry of Environment and Forests, Government of India have issued notification titled "Environment Impact Assessment" Obearing number S.O.60 (E) dated :27.01.1994 for seeking environmental clearance for projects listed in schedule-1 of Environment Impact Assessment Notification at Ministry of Environment and Forests, Government of India. The said Notification gives the procedure to be adopted by the project proponent for seeking environmental clearance from Ministry of Environment & Forests, Government of India. The project proponent is required to execute the project strictly in accordance with the conditions stipulated in the clearance letter of Ministry of Environment & Forests, Government of India. The conditions so stipulated by Ministry of Environment & Forest. Government of India are not being monitored periodically by the Ministry of Environment & Forests, Government of India, Department of Forest, Ecology and Environment. To oversee the compliances to the conditions imposed in the environmental clearance letter issued by the Ministry of Environment & Forests, Government of India, the Government desires to constitute a Committee for inspection of the industry /project so executed by the project proponent. The Committee constituted will inspect the industries/ projects in random basis and submit the report for compliance of the conditions by the project proponent to the Department of Forest, Ecology and Environment for further action. Hence the order.

**Govt Order No. FEE 153 ECO 2005, Bangalore, dated 16th June 2006**

In the circumstances explained in the preamble the Government is pleased to constitute a committee to inspect the industries/ projects area which are coming under the provisions of Environment Impact Assessment Notification No. So. (E) dated 27.01.1994 and amendment issued there after by the Ministry of Environment and Forests, Government of India.

| | | | |
|---|---|---|---|
| 1. | Senior Director, (Technical Cell) Department of Forest, Ecology and Environment | - | Chairman |
| 2. | Member Secretary, Karantaka State Pollution Control Board Parisara Bhavan, Church Street, Bangalore-560 001. | - | Member |
| 3. | Chief Engineer, Bangalore Mahanagar Palike | - | Member |
| 4. | Chief Engineer,<br>Bangalore Water Supply and, Sewerage Board Bangalore. | - | Member |
| 5. | Town Planning Member, Bangalore Development Authority Bangalore | - | Member |
| 6. | Shri Girish.K<br>Scientific Officer Department of Forest, Ecology and Environment | - | Member Secretary |

**The terms and conditions of the Committee are as follow:**

1. The Inspection of Industries/projects by the Committee shall be done on random basis.
2. The Committee shall inspect the project area to ensure implementation of necessary environmental management aspects.
3. The inspection on specific complaints referred by the Departent shall also be attended by the Committee.
4. Inspection report of the Committee shall be submitted to the Secretary to Govt. (Ecology and Environment ), Department of Forest, Ecology and Environment for further orders.

By Order and in the name of the Governor of Karnataka,

**N.R. JAGANMATHA**

P.R. 976

Under Secretary to Government

Dept. of Forest, Ecology and Environment

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಗ್ರಾಹಕರಿಗೆ ಸಾಲ ರೂಪದಲ್ಲಿ ಮಾರಾಟ ಮಾಡಿದ ರೇಷ್ಮೆಯ ಅವಧಿ ಮೀರಿದ ಸಾಲವನ್ನು (Over Due Loans) ವಸೂಲು ಮಾಡುವುದಕ್ಕಾಗಿ ಪರಿಷ್ಕೃತ "ಒಂದೇ ಬಾರಿ ಇತ್ಯರ್ಥ ಯೋಜನೆ" (OTS) ಯನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ: ಕೆ.ಎಸ್.ಎಂ.ಬಿ/ ಆರ್.ಇ.ಸಿ./ ಸಮಾಧಾನ ಯೋಜನೆ/2003-2004/1801, ದಿನಾಂಕ:28.2.2004 ಹಾಗೂ 3.2.2005, 24.2.2005 ಮತ್ತು 23.1.2006 ರ ಪತ್ರಗಳು

**ಪ್ರಸ್ತಾವನೆ:**

ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಮಾರುಕಟ್ಟೆ ಮಧ್ಯಪ್ರವೇಶದ ಮೂಲಕ ರೇಷ್ಮೆ ನೂಲಿನ ಬೆಲೆ ಸ್ಥಿರೀಕರಣದ ಕಾರ್ಯವನ್ನು ನಡೆಸುತ್ತಿರುವ ಸಂಸ್ಥೆಯಾಗಿದ್ದು ಇದರನ್ವಯ ಖರೀದಿಸಿದ ರೇಷ್ಮೆಯನ್ನು ತನ್ನ ಮಾರಾಟ ಶಾಖೆಗಳ ಮುಖಾಂತರ ಮಾರಾಟ ಮಾಡುತ್ತಿದೆ. ರೇಷ್ಮೆ ನೂಲಿನ ವಹಿವಾಟಿನಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯಲ್ಲಿಯೂ ಸೇರಿದಂತೆ ನೂಲಿನ ವ್ಯಾಪಾರವು ಗಣನೀಯ ರೂಪದಲ್ಲಿ ಸಾಲದ ರೂಪದಲ್ಲಿ ನಡೆಯುತ್ತಿದೆ. ಹಾಗೂ ಈ ಪದ್ಧತಿಯು ಸಂಸ್ಥೆಯಲ್ಲಿ ಕಳೆದ ಸುಮಾರು 20 ವರ್ಷಗಳಿಂದ ಅಸ್ತಿತ್ವದಲ್ಲಿದೆ.

2. ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆಯಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರು ಸಂಸ್ಥೆಯಲ್ಲಿ ಈ ಹಿಂದೆ ಗ್ರಾಹಕರಿಗೆ ನೀಡಲಾಗಿದ್ದ ರೇಷ್ಮೆಯ ಸಾಲದಲ್ಲಿ ಸಾಕಷ್ಟು ಪ್ರಮಾಣದ ಸಾಲ ವಸೂಲಿ ಆದನಂತರ ಬಾಕಿ ಇದ್ದ ಅವಧಿ ಮೀರಿದ ಸಾಲವನ್ನು ವಸೂಲಿ ಮಾಡುವುದಕ್ಕಾಗಿ "ಸಮಾಧಾನ ಯೋಜನೆ" ಎಂಬ ಹೆಸರಿನ "ಒಂದೇ ಬಾರಿ ಇತ್ಯರ್ಥ ಯೋಜನೆ" (One Time Settlement Scheme) ಯನ್ನು ಏಪ್ರಿಲ್ 2002ರಲ್ಲಿ ನೀಡಿ ಅದನ್ನು 30.6.2003 ರವರೆಗೂ ವಿಸ್ತರಿಸಲಾಗಿತ್ತು ಎಂದು ತಿಳಿಸಿದ್ದಾರೆ. ಸದರಿ ಯೋಜನೆಯಲ್ಲಿ ಸುಸ್ತಿ ಬಡ್ಡಿಯ ಮತ್ತು ವಸೂಲಾತಿ ಶುಲ್ಕದ (PMRA Charges) ಪೂರ್ತಿ ವಿನಾಯಿತಿಯನ್ನು ಮತ್ತು ಕಟ್ಟಬೇಕಾದ ಒಟ್ಟು ಬಾಕಿಯನ್ನು ಒಂದೇ ಕಂತಿನಲ್ಲಿ ತೀರಿಸುವವರಿಗೆ ಸರಳ ಬಡ್ಡಿಯಲ್ಲಿ 40 ಶೇಕಡ ರಿಯಾಯತಿ ಹಾಗೂ ಕಟ್ಟಬೇಕಾದ ಮೊತ್ತವನ್ನು 3 ಕಂತುಗಳಲ್ಲಿ ತೀರಿಸುವವರೆಗೆ ಸರಳ ಬಡ್ಡಿಯಲ್ಲಿ 30 ಶೇಕಡ ರಿಯಾಯತಿಯನ್ನು ನೀಡಲಾಗಿತ್ತು. ಅಸಲಿನ ಮೊತ್ತದಲ್ಲಿ ಯಾವುದೇ ರಿಯಾಯಿತಿ ಇರುವುದಿಲ್ಲ.

3. "ಒಂದೇ ಬಾರಿ ತಿರುವಳಿ ಯೋಜನೆ"ಗೆ ಬಂದ ಪ್ರತಿಕ್ರಿಯೆಯು ಬಹಳ ಕಡಿಮೆಯಾಗಿದ್ದು, ದಿನಾಂಕ:30.6.2003 ರಂದು ಇದ್ದಂತೆ ರೂ. 561 ಲಕ್ಷ (ಐನೂರು ಅರವತ್ತೊಂದು ಲಕ್ಷ ರೂಪಾಯಿಗಳು ಮಾತ್ರ) ಅವಧಿ ಮೀರಿದ ಸಾಲದ ಮೊತ್ತವು (ಬಡ್ಡಿ ಸೇರಿ) ಬಾಕಿ ಇದ್ದುದರಿಂದ ನಿರ್ದೇಶಕರ ಮಂಡಳಿಯು ಸಂಸ್ಥೆಯಲ್ಲಿ ಅಸ್ತಿತ್ವದಲ್ಲಿರುವ ಸಾಲದ ಯೋಜನೆಯನ್ನು ಪರಿಶೀಲಿಸುವುದಕ್ಕಾಗಿ ಒಂದು ಸಮಿತಿಯನ್ನು ನೇಮಿಸಿ ಸದರಿ ಸಮಿತಿಯು ಈ ಕೆಳಕಂಡ 2 ಅಂಶಗಳ ಬಗ್ಗೆ ಶಿಫಾರಸ್ಸನ್ನು ನೀಡಿರುತ್ತದೆ.

i) ಇಂತಹ ಯೋಜನೆಗಳಲ್ಲಿ ಸಾಮಾನ್ಯವಾಗಿ ಅನುಸರಿಸುವ ಕ್ರಮಗಳನ್ನು ಗಮನದಲ್ಲಿಟ್ಟುಕೊಂಡು ಬಾಕಿ ಇರುವ ಅವಧಿ ಮೀರಿದ ಸಾಲದ ಮಸೂಲಾತಿಗಾಗಿ ಸಾಧ್ಯವಿದ್ದಷ್ಟುಮಟ್ಟಿಗೆ ಇನ್ನು ಸ್ವಲ್ಪ ಹೆಚ್ಚಿನ ರಿಯಾಯತಿ ನೀಡಿ, ಯೋಜನೆಯು ಜಾರಿಯಲ್ಲಿರುವ ಅವಧಿಯು ಮುಗಿದ ನಂತರ ಬಾಕಿ ಉಳಿಯುವ ಅವಧಿ ಮೀರಿದ ಸಾಲದ ಮೊತ್ತವನ್ನು ಕಾನೂನು ಕ್ರಮಗಳನ್ನು ಅನುಸರಿಸಿ ವಸೂಲಿ ಮಾಡುವುದು.

ii) ಕಂಪೆನಿಯಲ್ಲಿ ಅನುಸರಿಸಬೇಕಾದ ಮುಂದಿನ/ ಭವಿಷ್ಯತ್ತಿನ ಸಾಲ ರೂಪದ ರೇಷ್ಮೆ ನೂಲಿನ ಮಾರಾಟದ ಕಾರ್ಯನೀತಿಗಳು.

4. ಸಮಿತಿಯು ಮಾಡಿದ ಸಲಹೆಗಳು ಮತ್ತು ಶಿಫಾರಸ್ಸುಗಳನ್ನು ಕ್ರಮವಾಗಿ ದಿನಾಂಕ:03.1.2004 ರಂದು ಮತ್ತು 13.2.2004 ರಂದು ನಡೆದ ನಿರ್ದೇಶಕರ ಮಂಡಳಿಯ ಸಭೆಗಳಲ್ಲಿ ಮಂಡಿಸಲಾಗಿ ಠರಾವು ಸಂಖ್ಯೆ:1713 ಮತ್ತು 1714 ರಂತೆ ಈ ವಿಷಯದ ಬಗ್ಗೆ ನಿರ್ದೇಶಕರ ಮಂಡಳಿಯು ಕೆಲವೊಂದು ನಿರ್ಧಾರಗಳನ್ನು ತೆಗೆದುಕೊಂಡಿರುತ್ತದೆ. ಈ ಹಿನ್ನಲೆಯಲ್ಲಿ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಈ ಠರಾವುಗಳ ಬಗ್ಗೆ ಸರ್ಕಾರದ ಅನುಮೋದನೆ ಮತ್ತು ಸೂಕ್ತ ನಿರ್ದೇಶನಗಳನ್ನು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

5. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ದಿನಾಂಕ:22.9.2005 ರಂದು ಇಲಾಖಾ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ, ಪ್ರಸ್ತಾವನೆಯು ಸಂಸ್ಥೆಯ ಹಿತದೃಷ್ಟಿಯಿಂದ ಸೂಕ್ತವಾಗಿರುವುದರಿಂದ ಅದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲು ನಿರ್ಧರಿಸಲಾಯಿತು. ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ತನ್ನ ಸಹಮತಿಯನ್ನು ನೀಡಿರುತ್ತದೆ. ಮೇಲಿನ ಸಂಕ್ಷಿಪ್ತ ವಿವರಗಳ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ವಾಕೈ 46 ರೇಉನಿ 2004, ಬೆಂಗಳೂರು, ದಿನಾಂಕ:15ನೇ ಜೂನ್ 2006**

ಠರಾವು ಸಂಖ್ಯೆ:1713 ಮತ್ತು 1714 ರ ಅನ್ವಯ ಸಂಸ್ಥೆಯ ನಿರ್ದೇಶಕರ ಮಂಡಳಿಯಲ್ಲಿ ತೆಗೆದುಕೊಂಡಿರುವ ನಿರ್ಧಾರಗಳ ಹಿನ್ನಲೆಯಲ್ಲಿ ಈ ಕೆಳಕಂಡ ಎರಡು ಭಾಗಗಳಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಉಲ್ಲೇಖ (1) ರಂತೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಅನುಷ್ಠಾನಗೊಳಿಸಲು ಈ ಮೂಲಕ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

i) ಬಾಕಿ ಇರುವ ಅವಧಿ ಮೀರಿದ ಸಾಲದ ಮೊತ್ತವನ್ನು ವಸೂಲಿ ಮಾಡುವುದಕ್ಕಾಗಿ ಹಿಂದಿನ ಯೋಜನೆಗಿಂತ ಸ್ವಲ್ಪ ಹೆಚ್ಚಿನ ರಿಯಾಯಿತಿಯನ್ನು ನೀಡಿ, "ಉದಾರೀಕೃತ ಸಮಾಧಾನ ಯೋಜನೆ (Libaralised Samadhana Scheme)" ಎಂಬ ಹೆಸರಿನ ಪರಿಷ್ಕೃತ "ಒಂದೇ ಬಾರಿ ಇತ್ಯರ್ಥ ಯೋಜನೆ(OTS)" ಯನ್ನು ಅನುಷ್ಠಾನಗೊಳಿಸಲು",

ii) ಸಂಸ್ಥೆಯ, ಮುಂದಿನ/ಭವಿಷ್ಯತ್ತಿನ ರೇಷ್ಮೆಯನ್ನು ಸಾಲ ರೂಪದಲ್ಲಿ ನೀಡುವ ಬಗೆಗಿನ ಕಾರ್ಯನೀತಿಗಳು.

2) ಮೇಲ್ಕಂಡ ಅನುಮೋದನೆಯನ್ನು ಈ ಕೆಳಗಿನ ವಿವರಗಳಂತೆ ನೀಡಲಾಗಿದೆ.

I. ಉದಾರೀಕೃತ ಸಮಾಧಾನ ಯೋಜನೆ ಮತ್ತು ಮುಂದಿನ ರೇಷ್ಮೆ ಸಾಲ ನೀಡಿಕೆಯ ಅನುಷ್ಠಾನದ ವಿಧಿವಿಧಾನಗಳು, ಸಾಲಕ್ಕೆ ಪಡೆಯುವ ಭದ್ರತೆ ಮುಂತಾದವುಗಳು ನಿರ್ದೇಶಕರ ಮಂಡಳಿಯಲ್ಲಿ ಸರ್ವಾನುಮತದಿಂದ ತೀರ್ಮಾನ ಆಗಿರುವಂತೆ ಇರುವುದು.

II. ಉದಾರೀಕೃತ ಸಮಾಧಾನ ಯೋಜನೆಯ ಬಗ್ಗೆ:

i) ಅಸಲು ಮೊತ್ತದಲ್ಲಿ ಯಾವುದೇ ರಿಯಾಯಿತಿ ಇರುವುದಿಲ್ಲ ಮತ್ತು ಸುಸ್ತಿ ಬಡ್ಡಿ ಹಾಗೂ ಸಾಲ ವಸೂಲಾತಿ ಶುಲ್ಕವನ್ನು (PMRA Charges) ಪೂರ್ಣವಾಗಿ ಮನ್ನಾ ಮಾಡುವುದು.

ii) ಅವಧಿ ಮೀರಿದ ಸಾಲಕ್ಕೆ ಅನ್ವಯಿಸುವ 16 ಶೇಕಡ ಸರಳ ಬಡ್ಡಿಯಲ್ಲಿ ಅಸಲು ಸೇರಿದಂತೆ ಪಾವತಿಸಬೇಕಾದ ಮೊತ್ತವನ್ನು ಒಂದೇ ಕಂತಿನಲ್ಲಿ ಪಾವತಿ ಮಾಡುವ ಸುಸ್ತಿದಾರರಿಗೆ ಸರಳ ಬಡ್ಡಿಯಲ್ಲಿ 8 ಶೇಕಡ ರಿಯಾಯತಿ ನೀಡಿ. ಅಸಲು ಮೊತ್ತವನ್ನು ಮತ್ತು ಉಳಿದ 8 ಶೇಕಡ ಸರಳ ಬಡ್ಡಿಯನ್ನು ವಸೂಲು ಮಾಡುವುದು ಹಾಗೂ ಪರ್ಯಾಯವಾಗಿ ಪಾವತಿಸಬೇಕಾದ ಮೊತ್ತವನ್ನು 3 ಕಂತುಗಳಲ್ಲಿ ಪಾವತಿ ಮಾಡುವ ಸುಸ್ತಿದಾರರಿಗೆ ಸರಳ ಬಡ್ಡಿಯಲ್ಲಿ 6 ಶೇಕಡ ರಿಯಾಯಿತಿ ನೀಡಿ, ಅಸಲು ಮೊತ್ತವನ್ನು ಮತ್ತು ಉಳಿದ 10 ಶೇಕಡ ಸರಳ ಬಡ್ಡಿಯನ್ನು ವಸೂಲು ಮಾಡುವುದು.

iii) ಯೋಜನೆಯು ಜಾರಿಯಲ್ಲಿರುವ ಅವಧಿಯಲ್ಲಿ ಅಸಲು ಮೊತ್ತ ಮತ್ತು ಮೇಲಿನ ಕ್ರಮ ಸಂಖ್ಯೆ (ii) ರಂತೆ ಅನ್ವಯಿಸುವ ಸರಳ ಬಡ್ಡಿಯನ್ನು ವಿಧಿಸಿ, ಅಸಲು ಸೇರಿದಂತೆ ಅಂತಹ ಅನ್ವಯಿಸುವ ಒಟ್ಟು ಬಾಕಿ ಮೊತ್ತವನ್ನು ವಸೂಲಿ ಮಾಡುವುದು.

III. ಮುಂದಿನ/ಭವಿಷ್ಯತ್ತಿನ ಸಾಲ ರೂಪದ ರೇಷ್ಮೆ ಮಾರಾಟದ ಕಾರ್ಯ ನೀತಿಯ ಬಗ್ಗೆ

i) ಭವಿಷ್ಯತ್ತಿನ ಸಾಲ ರೂಪದ ರೇಷ್ಮೆ ನೀಡಿಕೆಗೆ ಮತ್ತು ಸಾಲದ ಗ್ರಾಹಕರ ನೋಂದಾವಣೆಗೆ ಪ್ರತಿಯೊಬ್ಬ ಸಾಲದ ಗ್ರಾಹಕರಿಗೂ, ಒಂದೇ ಸಮನಾಗಿ, ಒಂದು ಸಲಕ್ಕೆ ರೂ.10 ಲಕ್ಷ (ಹತ್ತು ಲಕ್ಷ ರೂಪಾಯಿಗಳು ಮಾತ್ರ) ಗರಿಷ್ಠ ಮಿತಿಯನ್ನು ನಿಗದಿಪಡಿಸುವುದು.

ii) ಭವಿಷ್ಯತ್ತಿನ ರೇಷ್ಮೆ ಸಾಲ ನೀಡಿಕೆ ಮತ್ತು ಸಾಲದ ಗ್ರಾಹಕರ ನೋಂದಾವಣೆಗೆ ಈಕೆಳಕಂಡಂತೆ ಸರಳ ಬಡ್ಡಿ ದರಗಳನ್ನು ಪರಿಷ್ಕರಿಸಿ ಈಗ ಇರುವ ದರಗಳಿಗಿಂತ ಸ್ವಲ್ಪಮಟ್ಟಿಗೆ ಕಡಿಮೆ ಮಾಡಿ ನಿಗದಿಪಡಿಸುವುದು.

| ಕ್ರ. ಸಂ. | ಮರುಪಾವತಿ ಅವಧಿ (ದಿನಗಳಲ್ಲಿ) | ಈಗ ಇರುವ ಸರಳ ಬಡ್ಡಿದರ | ಪರಿಷ್ಕೃತ ಸರಳ ಬಡ್ಡಿದರ |
|---|---|---|---|
| 1. | 30 ದಿನಗಳ ಒಳಗೆ | 8% | 7% |
| 2. | 31ನೇ ದಿನ ಮತ್ತು 60 ದಿನಗಳ ನಡುವೆ | 10% | 9% |
| 3. | 61ನೇ ದಿನ ಮತ್ತು 90 ದಿನಗಳ ನಡುವೆ | 14% | 12% |
| 4. | 90 ದಿನಗಳ ನಂತರ ಮರುಪಾವತಿ (ಅವಧಿ ಮೀರದ /ಸುಸ್ತಿಯಾದ ಸಾಲ) | 16% | 14% |

iii) ಭವಿಷ್ಯತ್ತಿನ ಸಾಲ ರೂಪದ ರೇಷ್ಮೆ ನೀಡಿಕೆಗೆ ಅವಧಿ ಮೀರಿದ ಸಾಲದ ಮೊತ್ತಕ್ಕೆ ಸುಸ್ತಿ ಬಡ್ಡಿಯನ್ನು 91 ನೇ ದಿನದಿಂದ 180 ನೇ ದಿನದವರೆಗೆ 2 ಶೇಕಡದಂತೆ ಮತ್ತು 181 ನೇ ದಿನದ ನಂತರ ಸಾಲದ ಸಂಪೂರ್ಣ ಮರುಪಾವತಿ ಆಗುವವರೆಗೆ 5 ಶೇಕಡದಂತೆ ನಿಗದಿಪಡಿಸುವುದು (90ನೇ ದಿನದ ನಂತರ ಸಾಲವು ಅವಧಿ ಮೀರಿದ ಸಾಲ/ಸುಸ್ತಿ ಆಗುತ್ತದೆ)

iv) ಭವಿಷ್ಯತ್ತಿನ ಸಾಲದ ಗ್ರಾಹಕರ ನೋಂದಾವಣೆಗೆ ಪಡೆದುಕೊಳ್ಳುವ ಭದ್ರತೆಯ ಬಗ್ಗೆ ಮತ್ತು ಒಂದು ವರ್ಷದಲ್ಲಿ ಒಟ್ಟು ಮಾರಾಟದ ಪ್ರಮಾಣಕ್ಕೆ ಹೋಲಿಸಿದಲ್ಲಿ ಸಾಲ ರೂಪದಲ್ಲಿ ರೇಷ್ಮೆ ನೂಲನ್ನು ಮಾರಾಟ ಮಾಡುವ ಮಿತಿಯನ್ನು ಈಗ ಇರುವ 35 ಶೇಕಡ ದಿಂದ 50 ಶೇಕಡಕ್ಕೆ ಹೆಚ್ಚಿಸುವ ಬಗ್ಗೆ ನಿರ್ದೇಶಕರ ಮಂಡಳಿಯಲ್ಲಿ ತೀರ್ಮಾನವಾದಂತೆ ಕ್ರಮ ತೆಗೆದುಕೊಳ್ಳುವುದು.

IV ಸಾರ್ವಜನಿಕ ಉದ್ದಿಮೆಗಳ ಇಲಾಖೆಯ (DPE) ಸಲಹೆಯಂತೆ "ಉದಾರೀಕೃತ ಸಮಾಧಾನ ಯೋಜನೆ"ಯ ಜಾರಿಗಾಗಿ ನಿಗಧಿಪಡಿಸಿದ Cut off ದಿನಾಂಕದಂದು ಇದ್ದಂತೆ, ಅಪ್ರಾಪ್ತ ವಯಸ್ಸಿನ ಮಕ್ಕಳು ಮಾತ್ರ ಇದ್ದು, ಮರಣ ಹೊಂದಿದ್ದ ಸುಸ್ತಿದಾರರಿಗೆ ಸಂಬಂಧಪಟ್ಟಂತೆ, ಸದರಿ ಯೋಜನೆಯ ವ್ಯಾಪ್ತಿಗೆ ಬರುವ ಬೇರೆ ಸುಸ್ತಿದಾರರಿಗೆ ಸರಳ ಬಡ್ಡಿಯಲ್ಲಿ ಮೇಲೆ ವಿವರಿಸಿದಂತೆ ನೀಡುವ ರಿಯಾಯಿತಿಗಿಂತ ಹೆಚ್ಚುವರಿಯಾಗಿ 2 ಶೇಕಡ ರಿಯಾಯಿತಿಯನ್ನು ನೀಡಲು ಮಾಡಿರುವ ಪ್ರಸ್ತಾವನೆಯನ್ನು ಒಪ್ಪಲಾಗಿದೆ ಮತ್ತು ಈ ಬಗ್ಗೆ ಮಂಡಳಿಯು ಸೂಕ್ತ ಕ್ರಮ ತೆಗೆದುಕೊಳ್ಳಬಹುದಾಗಿದೆ.

(3) ಟಿಪ್ಪಣಿ ಸಂಖ್ಯೆ: ಆಇ /243/ವೆಚ್ಚ -01/2006, ದಿನಾಂಕ:19.4.2006 ರಂತೆ ಆರ್ಥಿಕ ಇಲಾಖೆಯ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 977

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ)

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಪ್ರಭಾಕರ ಬಾಲಕೃಷ್ಣ, ಆಂಗ್ಲ ಭಾಷಾ ಉಪನ್ಯಾಸಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾಗಿದ್ದಕ್ಕಾಗಿ ಅವರಿಗೆ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಟಿಇ 79 ಇಎಸ್‌ಟಿ (2) ಬಿ 90 ಡಿಇಕ್ಯೂ (1), ದಿ:15.7.92.
2. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿ:14.7.94 ರ ತೀರ್ಪು.
3. ಸರ್ಕಾರದ ಆದೇಶ ಸಂಖ್ಯೆ:ಇಡಿ 18 ಟಿಪಿಇ 93, ದಿ:17.11.1994.

4. ಸರ್ಕಾರದ ಆದೇಶ ಸಂಖ್ಯೆ:ಇಡಿ 326 ಟಿಪಿಇ 99, ದಿ:2.3.2000.
5. ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 326 ಟಿಪಿಇ 99, ದಿ:3.10.2002
6. ಸಕಾರದ ಆದೇಶ ಸಂಖ್ಯೆ:ಇಡಿ 326 ಟಿಪಿಇ 99, ದಿ:3.10.2002.
7. ಜಂಟಿ ನಿರ್ದೇಶಕರ (ಆಡಳಿತ ಹಾಗೂ ವಿಚಾರಣಾಧಿಗಳ) ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಡಿಟಿಇ 01 ಡಿಇಕ್ಯೂ (1) 94, ದಿ:6.11.2004.

**ಪ್ರಸ್ತಾವನೆ**

ಮೇಲೆ (1) ರಲ್ಲಿ ಓದಲಾದ ದಿನಾಂಕ:15.7.1992 ರ ತಾಂತ್ರಿಕ ಶಿಕ್ಷಣ ನಿರ್ದೇಶಕರ ಆದೇಶದಲ್ಲಿ ಶ್ರೀ ಪ್ರಭಾಕರ ಬಾಲಕೃಷ್ಣ, ಆಂಗ್ಲ ಭಾಷಾ ಉಪನ್ಯಾಸಕರು ದಿನಾಂಕ:1.8.1989 ರಿಂದ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿದ್ದ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿ ಆಧರಿಸಿ ಅವರನ್ನು ಸೇವೆಯಿಂದ ವಜಾಗೊಳಿಸಲಾಗಿತ್ತು. ಸದರಿ ಆದೇಶವನ್ನು ಪ್ರಶ್ನಿಸಿ ಶ್ರೀ ಪ್ರಭಾಕರ ಬಾಲಕೃಷ್ಣ ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ (ಕೆ.ಎ.ಟಿ.) ಅರ್ಜಿ ಸಂಖ್ಯೆ:866:99ನ್ನು ದಾಖಲಿಸಿದ್ದು, ಈ ಬಗ್ಗೆ ಮೇಲೆ (2)ರಲ್ಲಿ ಓದಲಾದ ಕೆ.ಎ.ಟಿ. ಯ ತೀರ್ಪಿನಲ್ಲಿ ಅರ್ಜಿದಾರರಾದ ಶ್ರೀ ಪ್ರಭಾಕರ ಬಾಲಕೃಷ್ಣರವರಿಗೆ ವಿಚಾರಣಾ ವರದಿಯ ಪ್ರತಿಯನ್ನು ಒದಗಿಸಿ ಹೇಳಿಕೆಗೆ ಅವಕಾಶ ನೀಡದಿದ್ದ ಕಾರಣ ಸದರಿಯವರನ್ನು ಸೇವೆಯಿಂದ ವಜಾಗೊಳಿಸಿದ್ದ ದಿನಾಂಕ:15.7.92ರ ಆದೇಶವನ್ನು ರದ್ದುಗೊಳಿಸಿ ಸದರಿಯವರಿಗೆ ವಿಚಾರಣಾ ವರದಿಯನ್ನು ಹೇಳಿಕೆಯನ್ನು ಪಡೆದು ಪರಿಶೀಲಿಸಿ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಪ್ರಭಾಕರ ಬಾಲಕೃಷ್ಣ ರವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ ವಿಚಾರಣೆ ಇತ್ಯರ್ಥಗೊಳ್ಳುವವರೆಗೆ ನಿಲಂಬನೆಯಲ್ಲಿಡಲಾಗಿತ್ತು. ತದನಂತರ ತಾಂತ್ರಿಕ ಶಿಕ್ಷಣ ನಿರ್ದೇಶಕರು ಅವರ ದಿನಾಂಕ:2.1.95ರ ಜ್ಞಾಪನದಲ್ಲಿ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸದರಿಯವರ ನಿಲಂಬನೆಯನ್ನು ತೆರವುಗೊಳಿಸಿ ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಹಾಸನ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಿದ್ದರು. ಆದರೂ ಸದರಿಯವರು ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಹಾಸನ ಇಲ್ಲಿಗೆ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತವಾಗಿ ಗೈರುಹಾಜರಾಗಿ ಮುಂದುವರೆದಿದ್ದ ಕಾರಣ ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತುಗೊಳಿಸಲಾಗಿರುತ್ತದೆ. ತದನಂತರ ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿನಾಂಕ:3.10.2002ರ ಸರ್ಕಾರದ ಅಧಿಸೂಚನೆಯಲ್ಲಿ ಸದರಿಯವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ ಸರ್ಕಾರಿ ಪಾಲಿಟೆಕ್ನಿಕ್, ಬೀದರ್ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿದ್ದು ಅಲ್ಲಿ ಶ್ರೀ ಪ್ರಭಾಕರ ಬಾಲಕೃಷ್ಣ ರವರು ದಿನಾಂಕ:30.10.2002 ರಂದು ಕರ್ತವ್ಯಕ್ಕೆ ಹಾಜರಾಗಿದ್ದಾರೆ. ದಿನಾಂಕ:2.11.2002 ರಿಂದ ದಿನಾಂಕ:30.11.2002ರ ವರೆಗೆ ರಜೆ ಹಾಕಿ ಹೋದವರು ನಂತರ ಕರ್ತವ್ಯಕ್ಕೆ ಬಂದಿರುವುದಿಲ್ಲ. ದಿನಾಂಕ:4.12.2002 ರ ರಿಂದ 14.12.2002ರ ಅವಧಿಗೆ ರಜೆ ಮಂಜೂರಾಗಿರುವುದಿಲ್ಲ.

ಶ್ರೀ ಪ್ರಭಾಕರ ಬಾಲಕೃಷ್ಣ ರವರು ಈ ರೀತಿಯಾಗಿ ಸೇವೆಗೆ ಅನಧಿಕೃತ ಗೈರುಹಾಜರಾಗಿ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966 ರ ನಿಯಮ 3(1) (i) (ii) ಮತ್ತು (iii)ನ್ನು ಉಲ್ಲಂಘಿಸಿರುವ ದೋಷಾರೋಪಣೆಗಾಗಿ ಸದರಿಯವರ ವಿರುದ್ದ ಸಿ.ಸಿ.ಎ. ನಿಯಮಗಳಡಿಯಲ್ಲಿ ಶಿಸ್ತಿನ ಕ್ರಮ ಪ್ರಾರಂಭಿಸಲು ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ದಿನಾಂಕ:28.11.2000 ರಂದು ಕಾರಣ ಕೇಳುವ ನೋಟಿಸ್‌ನೊಡನೆ ಜಾರಿಮಾಡಲಾಗಿತ್ತು. ಇದಕ್ಕೆ ಉತ್ತರವಾಗಿ ಸದರಿಯವರು ಸಲ್ಲಿಸಿದ ವಿವರಣೆಯು ತೃಪ್ತಿಕರವಾಗಿಲ್ಲದಿದ್ದ ಕಾರಣ ಸತ್ಯಾಸತ್ಯತೆಯನ್ನು ತಿಳಿಯಲು ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ:3.10.2002ರ ಸರ್ಕಾರದ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನು ನೇಮಿಸಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿರುತ್ತದೆ. ಶ್ರೀ ಪ್ರಭಾಕರ ಬಾಲಕೃಷ್ಣ ಇವರ ಮೇಲಿನ ಆರೋಪಗಳ ಕುರಿತಂತೆ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಡೆಸಿ ದಿನಾಂಕ:6.11.2004 ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು ಅದರಲ್ಲಿ ಸದರಿಯವರ ಮೇಲೆ ಮಾಡಲಾದ ದೋಷಾರೋಪಣೆಗಳು ಸ್ಪಷ್ಟವಾಗಿ ಹಾಗೂ ನಿಸ್ಸಂಶಯವಾಗಿ ಸಾಬೀತಾಗಿರುತ್ತದೆಂದು ತಿಳಿಸಲಾಗಿದೆ. ಸದರಿ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ನೌಕರರಾದ ಶ್ರೀ ಪ್ರಭಾಕರ ಬಾಲಕೃಷ್ಣರವರಿಗೆ ದಿನಾಂಕ:2.2.2005 ರಂದು ಜಾರಿ ಮಾಡಿ ಸದರಿ ವರದಿಯ ಮೇಲೆ ಅವರು ಹೇಳುವುದೇನಾದರೂ ಇದ್ದಲ್ಲಿ ಸರ್ಕಾರಕ್ಕೆ ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ಅದರಂತೆ ಸದರಿಯವರು ಸಲ್ಲಿಸಿದ್ದ ವಿವರಣೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು ಇದು ಸಮರ್ಥನೀಯವೆಂದು ಕಂಡು ಬಂದಿರುವುದಿಲ್ಲ. ವಿಚಾರಣಾ ವರದಿಯನ್ನು, ಸಂಬಂಧಿಸಿರುವ ದಾಖಲಾತಿಗಳನ್ನು ಹಾಗೂ ಉಪನ್ಯಾಸಕರ ಹೇಳಿಕೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಶ್ರೀ ಪ್ರಭಾಕರ ಬಾಲಕೃಷ್ಣ, ಆಂಗ್ಲಭಾಷಾ ಉಪನ್ಯಾಸಕರು ಇವರು ಸರ್ಕಾರಿ ಸೇವೆಗೆ ದಿನಾಂಕ:1.8.89ರಿಂದ 29.10.2002 ರವರೆಗೆ ಮತ್ತು 15.12.2002 ರಿಂದ ಅನಧಿಕೃತ ಗೈರು ಹಾಜರಾಗಿರುವುದು ದೃಢಪಟ್ಟಿದು ಈ ದುರ್ನಡತೆಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ ಅವರನ್ನು ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ನಿಯಮ 8(viii) ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿದೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 326 ಟಿಪಿಇ 1999, ಬೆಂಗಳೂರು, ದಿನಾಂಕ: 16ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಸರ್ಕಾರವು ಶ್ರೀ ಪ್ರಭಾಕರ ಬಾಲಕೃಷ್ಣ, ಆಂಗ್ಲಭಾಷಾ ಉಪನ್ಯಾಸಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957 ರ ನಿಯಮ 8(viii) ರಡಿಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 978

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಕ್ರಮಾಂಕ:ಇಡಿ 29 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 16ನೇ ಜೂನ್ 2006**

ದಿನಾಂಕ: 22.5.2006ರ ಸರ್ಕಾರಿ ಆದೇಶ ಸಂ. ಇಡಿ 29 ಯುಆರ್‌ಸಿ 2006ರ ಆದೇಶದ ಭಾಗದಲ್ಲಿ ಕ್ರ.ಸಂ. (2) ರಲ್ಲಿರುವ ಶ್ರೀಮತಿ ಮೆಹ್ರಾಸ್ ಹೈಸ್ಕೂಲ್ ಎಜುಕೇಷನ್ ಸೊಸೈಟಿಯ ಶ್ರೀಮತಿ ಮೆಹ್ರಾಸ್ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು ಈ ಕಾಲೇಜಿಗೆ "2006-07ನೇ ಸಾಲಿಗೆ ಬದಲಾಗಿ 2005-06ನೇ ಶೈಕ್ಷಣಿಕ ಸಾಲಿಗೆ ಎಂದು" ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 979

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)